# ನಖಸ್ತುತಿ

## ೧

ಪಾನ್ ತ್ವಸ್ಮಾನ್ ಪುರುಹೂತ ವೈರಿ ಬಲವನ್ ಮಾತಂಗ
ಮಾದ್ಯದ್ಘಟಾ
ಕುಂಭೋಚ್ಚಾದ್ರಿವಿಪಾಟನಾಧಿಕಪಟುಪ್ರತ್ಯೇಕವಜ್ರಾಯಿತಾ:
ಶ್ರೀಮತ್ಕಂಠೀರವಾಸ್ಯ ಪ್ರತತ ಸುನಖರಾ ದಾರಿತಾರಾತಿದೂರ
ಪ್ರಧ್ವಸ್ತಧ್ವಾಂತಶಾಂತಪ್ರವಿತತಮನಸಾ ಭಾವಿತಾ ಭೂರಿಭಾಗೈ:

ಪುರುಹೂತ= ಇಂದ್ರನಿಗೆ, ವೈರಿ= ಶತ್ರುಗಳಾದ ದೈತ್ಯರೆಂಬ, ಬಲವನ್= ಬಲಶಾಲಿಗಳಾದ, ಮಾತಂಗ= ಆನೆಗಳ, ಮಾದ್ಯತ್

ಘಟಾ= ಮದಧಾರೆ ಸುರಿಸುವ ಸಮೂಹದ, ಕುಂಭ= ಕುಂಭಸ್ಥಲಗಳೆಂಬ, ಉಚ್ಚ= ಎತ್ತರವಾದ, ಅದ್ರಿ= ಬೆಟ್ಟಗಳ, ವಿಪಾಟನ= ಸೀಳುವುದರಲ್ಲಿ, ಅಧಿಕ= ಹೆಚ್ಚಾಗಿ, ಪಟು= ಸಮರ್ಥವಾದ, ಪ್ರತ್ಯೇಕ= ಬೇರೆ ಬೇರೆಯಾದ, ವಜ್ರಾಯಿತಾಃ= ವಜ್ರಾಯುಧದಂತಿರುವ, ದಾರಿತ= ನಾಶಮಾಡಲ್ಪಟ್ಟ, ಅರಾತಿ= ಕಾಮಾದಿ ಶತ್ರುಗಳುಳ್ಳ, ದೂರಪ್ರಧ್ವಸ್ತ= ದೂರದಲ್ಲಿಯೇ ನಾಶಮಾಡಲ್ಪಟ್ಟ, ಧ್ವಾಂತ= ಅಜ್ಞಾನರೂಪವಾದ ಕತ್ತಲೆಯುಳ್ಳ, ಶಾಂತ= ನಿರ್ವಿಕಾರವಾದ, ಪ್ರವಿತತ= ಸರ್ವೋತ್ತಮನಾದ ವಿಷ್ಣುವಿಗೆ ಸಂಬಂಧಿಸಿದ, ಮನಸಾ= ಮನಸ್ಸಿನಿಂದ, ಭೂರಿಭಾಗ್ಯೈಃ= ಭಾಗ್ಯವಂತರಾದ ಬ್ರಹ್ಮಾದಿದೇವತೆಗಳಿಂದ,ಭಾವಿತಾಃ= ಧ್ಯಾನಿಸಲ್ಪಟ್ಟ, ಶ್ರೀಮತ್ಕಂಠೀರವಾಸ್ಯ=  ಲಕ್ಷ್ಮೀನೃಸಿಂಹನ, ಪ್ರತತ= ವಿಸ್ತೃತಗಳಾದ, ಸುನಖರಾಃ= ಶ್ರೇಷ್ಠವಾದ ಉಗುರುಗಳು, ಅಸ್ಮಾನ್= ನಮ್ಮನ್ನು, ಪಾಂತು= ಕಾಪಾಡಲಿ.

2

ಲಕ್ಷ್ಮೀಕಾಂತ ಸಮಂತತೋಽಪಿ ಕಲಯನ್
ನೈವೇಶಿತುಸ್ತೇ ಸಮಂ
ಪಶ್ಯಾಮ್ಯುತ್ತಮವಸ್ತು ದೂರತರತೋಽಪಾಸ್ತಂ
ರಸೋ ಯೋಽಷ್ಟಮಃ ।
ಯದ್ರೋಷೋತ್ಕರದಕ್ಷನೇತ್ರಕುಟಿಲಪ್ರಾಂತೋತ್ಥಿ
ತಾಗ್ನಿಸುರತ್
ಖದ್ಯೋತೋಪಮವಿಷ್ಫುಲಿಂಗಭಸಿತಾ
ಬ್ರಹ್ಮೇಶಶಕ್ರೋತ್ಕರಾಃ

ಲಕ್ಷ್ಮೀದೇವಿಯ ಪತಿಯಾದ ನೃಸಿಂಹನೇ!
ಬ್ರಹ್ಮ,ರುದ್ರ,ಇಂದ್ರ,ಮೊದಲಾದವರು ಕೂಡ ನಿನ್ನ ಕೋಪದ
ಸಮೂಹದ ಬಲಗಣ್ಣಿನ ಒಂದು ನೋಟದಿಂದ ಹುಟ್ಟಿದ

ಬೆಂಕಿಯಲ್ಲಿ ಪ್ರಕಾಶಿಸುವ ಮಿಂಚುಹುಳುಗಳ ಸಾಮಾನರಾಗಿದ್ದಾರೋ ,ಮತ್ತು ಆ ಬೆಂಕಿಯ ಒಂದು ಕಡಿಯಿಂದ ಭಸ್ಮೀಭೂತರಾಗುತ್ತಾರೆ.(ಬ್ರಹ್ಮ,ರುದ್ರ,ಇಂದ್ರ ಮೊದಲಾದವರು) ಅಂತಹ ನಿನಗೆ ಸಮನಾದ ವ್ಯಕ್ತಿ ಯಾರು ಇಲ್ಲ. ನಾವು ಶಾಸ್ತ್ರಗಳನ್ನು ವಿಮರ್ಶೆಮಾಡಿ ಭಗವಂತನಿಗಿಂತ ಶ್ರೇಷ್ಠವಾದ ವ್ಯಕ್ತಿಯನ್ನು ಹುಡುಕುತ್ತೇವೆ? ಅಂದರೆ ಅದು ಎಂಟನೆಯ ರಸದಂತೆ ದೂರದಿಂದಲೇ ನಿರಾಕರಿಸಲ್ಪಡುತ್ತದೆ ಇದು ನಿಶ್ಚಿತ .(ಪ್ರಪಂಚದಲ್ಲಿ ಇರುವುದೆ ಆರು ರಸ ಎಳನೇಯ ರಸವೇ ಇಲ್ಲ! ಇನ್ನು ಎಂಟನೆಯ ರಸವನ್ನು ಹುಡುಕಿದರೆ ಹೇಗೆ ಮೂರ್ಖರಾಗುತ್ತೇವೆ. ಅದೇ ರೀತಿ ಇದು ಕೂಡ.)

# ಹರಿ ವಾಯುಸ್ಥುತಿ

01

(ಹರಿ:ಓಂ)

ಶ್ರೀಮದ್ವಿಷ್ಣ್ವಂಘ್ರಿನಿಷ್ಠಾತಿಗುಣಗುರುತಮಶ್ರೀಮದಾನಂದತೀರ್ಥ

ತ್ರೈಲೋಕ್ಯಾಚಾರ್ಯ ಪಾದೋಜ್ಜ್ವಲಜಲಜಲಸತ್

ಪಾಂಸವೋಽಸ್ಮಾನ್ ಪುನಂತು

ವಾಚಾಂ ಯತ್ರ ಪ್ರಣೇತ್ರೀ ತ್ರಿಭುವನಮಹಿತಾ ಶಾರದಾ

ಶಾರದೇಂದು

ಜ್ಯೋತ್ಸ್ನಾ ಭದ್ರಸ್ಮಿತಶ್ರೀಧವಲಿತಕಕುಭಾ ಪ್ರೇಮಭಾರಂ

ಬಭಾರ ।।1।।

ಮಂದಹಾಸದಿಂದ ಶರತ್ಕಾಲದ ಪೂರ್ಣಚಂದ್ರನಂತೆ ಕಾಂತಿಯಿಂದ ಕೂಡಿದ ಮತ್ತು ಮೂರುಲೋಕದಲ್ಲಿ ಸುಪ್ರಸಿದ್ಧಳಾದ ಸಕಲ ವಾಕ್ ಮತ್ತು ಮನೋಭಿಮಾನಿಯಾದ ಭಾರತೀದೇವಿಯು ಯಾರಲ್ಲಿ ಭಕ್ತಿಯನ್ನು ಮಾಡುವರೋ ಅಂತಹ ಮತ್ತು ಲಕ್ಷ್ಮೀಸಹಿತನಾದ ನಾರಾಯಣನ ಪಾದವೆಂಬ ಕಮಲದಲ್ಲಿ ಸಾದ ಭಕ್ತಿಯನ್ನು ಮಾಡುವ ಅಧಿಕಾಧಿಕ ಗುಣಗಳಿಂದ ಕೂಡಿದ ಸಜ್ಜನ ಸಮುದಾಯಕ್ಕೆ ಶಾಸ್ತ್ರವೆಂಬ ಅಮೃತವನ್ನು ಕರುಣಿಸಿದ ಶ್ರೀಮದಾಚಾರ್ಯರ ಯಾವ ಪಾದವೆಂಬ ಕಮಲದ ಧೂಳಗಳಲ್ಲಿ ನಿರಂತರ ದೇವತೆಗಳು ಭಕ್ತಿಯನ್ನು ಮಾಡುವರೋ ಅಂತಹ ಪಾದದ ಧೂಳು ನಮ್ಮನ್ನು ಪಾವನಮಾಡಲಿ..

ಮನ್ಮಥಾಚಾರ್ ಕಂಬಾಲೂರು

# 02

ಉತ್ಕಂಠಾಕುಂಠ ಕೋಲಾಹಲಜವ ವಿದಿತಾಜಸ್ರ ಸೇವಾನುವೃದ್ಧ

ಪ್ರಾಜ್ಞಾತ್ಮ ಜ್ಞಾನ ಧೂತಾಂಧತಮಸ ಸುಮನೋ ಮೌಲಿ

ರತ್ನಾವಲೀನಾಮ್।

ಭಕ್ತ್ಯುದ್ರೇಕಾವಗಾಢ ಪ್ರಘಟನ ಸಘಟಾತ್ಕಾರ ಸಂಘೃಷ್ಯಮಾಣ

ಪ್ರಾಂತ ಪ್ರಾಗ್ರ್ಯಾಂಘ್ರಿ ಪೀಠೋತ್ಥಿತಕನಕರಜಃ ಪಿಂಜರಾ

ರಂಜಿತಾಶಾಃ ।। 2।।

ಶ್ರೀಹರಿಯ ಜ್ಞಾನಕ್ಕಾಗಿ ಹಾತೊರೆದು ಬಂದ ದೇವತೆಗಳಿಗೆ ಅಜ್ಞಾನವೆಂಬ ಅಂಧಕಾರವನ್ನು ನಾಶಮಾಡಲು ಯೋಗ್ಯವಾದ ಸರ್ವಶ್ರೇಷ್ಠವಾದ ಶಾಸ್ತ್ರಗಳನ್ನು ಕರುಣಿಸಿದ್ದರಿಂದ ಭಕ್ತಿಯಿಂದ ಚಿನ್ನದ ಕಿರೀಟವನ್ನು ಧರಿಸಿದ ದೇವತೆಗಳು ತಮ್ಮ ಪಾದಪೀಠಕ್ಕೆ ಶಿರ ಬಾಗಿಸಿದರು. ಆ ದೇವತೆಗಳ ಚಿನ್ನದ ಕಿರೀಟದ

ಸಂಘರ್ಷದಿಂದ ಹೊರಬಂದ ಚಿನ್ನದ ಧೂಳಗಳು ತಮ್ಮ ಪಾದದ ಧೂಳಿನೊಡನೆ ಸೇರಿದಾಗ ಹಳದಿ ಮತ್ತು ಕೆಂಪು ಬಣ್ಣಗಳಿಂದ ಕೂಡಿ ಚೆನ್ನಾಗಿ ಶೋಭಿಸಲ್ಪಟ್ಟಿತು.. (ಅಂತಹ ವಿಶ್ವವನ್ನೆ ಬೆಳಗಿಸಿದ ಆ ಪಾದದ ಧೂಳಗಳು ನಮ್ಮನ್ನು ಪಾವನಮಾಡಲಿ...

## 03

ಜನ್ಮಾಧಿವ್ಯಾಧ್ಯುಪಾಧಿ ಪ್ರತಿಹತಿ ವಿರಹಪ್ರಾಪಕಾಣಾಂ ಗುಣಾನಾಂ

ಅಗ್ರ್ಯಾಣಾಮರ್ಪಕಾಣಾಂ ಚಿರಮುದಿತ ಚಿದಾನಂದ ಸಂದೋಹ ದಾನಾಮ್ ।

ಏತೇಷಾಮೇಷ ದೋಷಪ್ರಮುಷಿತಮನಸಾಂ ದ್ವೇಷಿಣಾಂ ದೂಷಕಾಣಾಂ

ದೈತ್ಯಾನಾಮಾರ್ತಿಮಂಧೇ ತಮಸಿ ವಿದಧತಾಂ ಸಂಸ್ತವೇ ನಾಸ್ಮಿ ಶಕ್ತ: ।। 3।।

ಹುಟ್ಟುವುದು,ಮನೋವ್ಯಥೆ, ಶರೀರದ ರೋಗ ರುಜಿನ, ಮರಣ ಇವುಗಳಿಂದ ಕೂಡಿದ ನಮಗೆ ಅದರಿಂದ ಶಾಶ್ವತ ಬಿಡುಗಡೆ ನೀಡುವಂತಹ ಭಕ್ತಿ,ವಿರಕ್ತಿ,ಸುಜ್ಞಾನಗಳನ್ನು ಸುಜನರಿಗೆ ಕರುಣಿಸುವುದರ ಜೊತೆಗೆ ಅವರ ನೈಜಾನಂದವನ್ನು(ನಿಜವಾದ ಸ್ವರೂಪಾನಂದವನ್ನು)ಅಭಿವ್ಯಕ್ತಗೊಳಿಸುವ, ಮತ್ತು ಮಿಥ್ಯಾಜ್ಞಾನಿಗಳನ್ನು ವಿಷ್ಣು-ವೈಷ್ಣವ ದ್ವೇಷಿಗಳನ್ನು ದು:ಖಸಾಗರದಲ್ಲಿ ಮುಳುಗಿಸಿ ನಿರಂತರ ವ್ಯಥೆ ನೀಡುವಂತಹ ತಮ್ಮ ಪಾದದ ಧೂಳುಗಳ ಬಗ್ಗೆ ವರ್ಣನೆ ಮಾಡಲು ನಾನು ಅಸಮರ್ಥನಾಗಿದ್ದೇನೇ.

# 04

ಅಸ್ಯಾವಿಷ್ಕರ್ತುಕಾಮಂ ಕಲಿಮಲ ಕಲುಷೇಽಸ್ಮಿನ್ ಜನೇ

ಜ್ಞಾನಮಾರ್ಗಂ

ವಂದ್ಯಂ ಚಂದ್ರೇಂದ್ರ ರುದ್ರ ದ್ಯುಮಣಿ ಫಣಿವಯೋ

ನಾಯಕಾದ್ಯೈರಿಹಾದ್ಯ ।

ಮಧ್ವಾಖ್ಯಂ ಮಂತ್ರಸಿದ್ಧಂ ಕಿಮುತ ಕೃತವತೋ

ಮಾರುತಸ್ಯಾವತಾರಂ

ಪಾತಾರಂ ಪಾರಮೇಷ್ಠ್ಯಂ ಪದಮಪವಿಪದಃ ಪ್ರಾಪ್ತುರಾಪನ್ನ

ಪುಂಸಾಮ್ ॥4॥

ಕಾಲಿಯುಗದ ಬಲದಿಂದ ಕಲುಷಿತವಾದ ಹೃದಯವಳ್ಳ

ಸಜ್ಜನರಿಗೆ ಜ್ಞಾನದಮಾರ್ಗವನ್ನು ತೋರಿಸಲೇಂದೆ

ಕುರುಣೆಯಿಂದ ಧರೆಗೆಬಂದ,ಚಂದ್ರ,ಸೂರ್ಯ,

ಗರುಡ,ಸರ್ಪಗಳಿಗೆ ರಾಜನಾದ ಮಹಾಶೇಷ,ರುದ್ರ ಮೊದಲಾದ

ದೇವತೆಗಳಿಂದ ನಿರಂತರ ಸ್ತೋತ್ರ ಮಾಡಿಸಿಕೊಳ್ಳಲು ಯೋಗ್ಯರಾದ ಬಳಿತ್ಥಾದಿ ವೇದಮಂತ್ರಗಳಿಂದ ಬಣ್ಣಿಸಲ್ಪಟ್ಟ ಅಪಾರಮಹಿಮೆಯುಳ್ಳ,ಶರಣಾಗುವ ಪುರುಷರನ್ನು ರಕ್ಷಿಸುವುದಕ್ಕೆ ಅವತಾರವನ್ನು ಮಾಡಿರುವ ಚತುರ್ಮುಖ ಬ್ರಹ್ಮನ ಪೀಠವನ್ನು ಅಲಂಕರಿಸಲಿರುವ ಮುಖ್ಯಪ್ರಾಣದೇವನಾದ ಈ ನಿಮ್ಮ ವರ್ಣನೆ ಮಾಡಲು ನಾನು ಸಮರ್ಥನಲ್ಲವೇ ಅಲ್ಲ.

# 05

ಉದ್ಯದ್ ವಿದ್ಯುತ್ ಪ್ರಚಂಡಾಂ ನಿಜರುಚಿನಿಕರ

ವ್ಯಾಪ್ತಲೋಕಾವಕಾಶೋ

ಬಿಭ್ರದ್ಭಿಮೋಭುಜೇ ಯೋಽಭ್ಯುದಿತ

ದಿನಕರಾಭಾಂಗದಾಢ್ಯಪ್ರಕಾಂಡೇ ।

ವೀರ್ಯೋದ್ಧಾರ್ಯಾಂ ಗದಾಗ್ರ್ಯಾಮಯಮಿಹ ಸುಮತಿಂ

ವಾಯುದೇವೋ ವಿದಧ್ಯಾತ್

ಅಧ್ಯಾತ್ಮಜ್ಞಾನನೇತಾ ಯತಿವರ ಮಹಿತೋ
ಭೂಮಿಭೂಷಾಮಣಿರ್ಮೇ ।।5।।

ಮುಖ್ಯಪ್ರಾಣದೇವರ ಕಾಂತಿಯು ವಿಶ್ವವನ್ನೇ ಬೆಳಗಿಸಿದ ಕಾಂತಿ .ಮಿಂಚಿನಂತೆ ಭಯಂಕರವಾದ ಎತ್ತುವುದಕ್ಕೆ ಅಸಾಧ್ಯವಾದ ಗದೆಗಳಲ್ಲಿ ಶ್ರೇಷ್ಠವಾದ ಕೌಮೋದಕೀ ಎಂಬ ಗದೆಯನ್ನು ಸೂರ್ಯನಂತೆ ಪ್ರಕಾಶಮಾನವಾದ ಭುಜದಲ್ಲಿ ಧರಿಸಿದ ತಾಮಸರಿಗೆ ಭಯವನ್ನು ನೀಡುವುದರಿಂದ ಭೀಮಸೇನ ಎಂದೆನಿಸಿದ ಮತ್ತು ಪರಮಾತ್ಮ ವಿಷಯಕವಾದ ತಿಳುವಳಿಕೆಗೆ ನಿಯಾಮಕರಾದ ಪರಮಹಂಸರಲ್ಲಿ ಶ್ರೇಷ್ಠರಾದ ದೂರ್ವಾಸ ಸನಕಾದಿ ಮುನಿಗಳಿಂದ ಪೂಜಿಸಲ್ಪಟ್ಟ ತತ್ವೋಜ್ಞವನ್ನು ನೀಡಲು ಶ್ರೇಷ್ಠವಾದ ಯತಿರೂಪದಿಂದ ಬಂದ ಭೂಮಂಡಲಕ್ಕೆ ರತ್ನದಂತೆ

ಇರುವ ಇಂತಹ ವಾಯುದೇವರ ಮಹಿಮೆಯನ್ನು ವರ್ಣಿಸುವ ಒಳ್ಳೆಯ ಚಾತುರ್ಯವನ್ನು  ನನಗೆ ಕರುಣಿಸಲಿ.

# 06

ಸಂಸಾರೋತ್ತಾಪ ನಿತ್ಯೋಪಶಮದಸದಯ

ಸ್ನೇಹಹಾಸಾಂಬುಪೂರ

ಪ್ರೋದ್ಯದ್ ವಿದ್ಯಾನವದ್ಯ ದ್ಯುತಿಮಣಿ ಕಿರಣಶ್ರೇಣಿ

ಸಂಪೂರಿತಾಶ:।

ಶ್ರೀವತ್ಸಾಂಕಾಧಿವಾಸೋಚಿತತರ ಸರಲ ಶ್ರೀಮದಾನಂದತೀರ್ಥ

ಕ್ಷೀರಾಂಭೋಧಿರ್ವಿಭಿಂದ್ಯಾದ್ ಭವದನಭಿಮತಂ ಭೂರಿ ಮೇ

ಭೂತಿಹೇತು: ।।6।।

ಶ್ರೀಮದಾನಂದತೀರ್ಥರು ಕ್ಷೀರಸಮುದ್ರದಂತೆ ಇದ್ದರೆ. ಈ ಸಮುದ್ರದಲ್ಲಿ ನೀರು ಯಾವುದು ಎಂದರೆ ಗರುಡ,ಶೇಷ,ರುದ್ರ,ಇವರೇ ಮೊದಲಾದ ದೇವತೆಗಳಲ್ಲಿ ಅಭಿಮಾನ ಮಾಡಿ ಎಲ್ಲ ಬಗೆಯ ವಿಪತ್ತುಗಳನ್ನು ಪರಿಹರಿಸುವುದರ ಜೊತೆಗೆ ಎಲ್ಲ ಬಗೆಯ ಸಂಪದವನ್ನು ಕರುಣಿವ ಶ್ರೀಮದಾನಂದತೀರ್ಥರ ವಾತ್ಸಲ್ಯದಿಂದ ಕೂಡಿದ ನಗುವೆ ಈ ಸಮುದ್ರದ ನೀರು . ಮತ್ತು ಈ ಸಮುದದಲ್ಲಿ ಇರುವ ಮಣಿ ಇತ್ಯಾದಿಗಳು ಯಾವುದು ಎಂದರೆ ಪ್ರಕಾಶಮಾನವಾದ ಅಜ್ಞಾನವೆಂಬ ಅಂಧಕಾರವನ್ನು ನಾಶಮಾಡಿ ಬೆಳಕು ನೀಡುವ ಶಾಸ್ತ್ರಗಳೆ ಈ ಸಮುದದಲ್ಲಿ ಇರುವ ಮಣಿ -ರತ್ನಗಳು . ಮತ್ತು ಶ್ರೇಷ್ಠವಾದ ಶ್ರೀವತ್ಸವನ್ನು ಧರಿಸಿದ ಪರಮಾತ್ಮನ ಸನ್ನಿಧಾನಪಾತ್ರರು ಆದ ಶ್ರೀಮದಾನಂದತೀರ್ಥರೆಂಬ ಕ್ಷೀರಸಾಗರವು ಮುಂದೆ ಬಹಳವಾಗಿ ಬರುವ ನಮ್ಮ ಎಲ್ಲ ಬಗೆಯ ವಿಪತ್ತುಗಳನ್ನು ಪರಿಹರಿಸಲಿ..

07

ಮೂರ್ಧನ್ಯೇಷೋಽಂಜಲಿರ್ಮೇ ದೃಢತರಮಿಹ ತೇ ಬಧ್ಯತೇ

ಬಂಧಪಾಶ

ಚ್ಛೇತ್ರೇ ದಾತ್ರೇ ಸುಖಾನಾಂ ಭಜತಿ ಭುವಿ ಭವಿಷ್ಯದ್ ವಿಧಾತ್ರೇ

ದ್ಯುಭರ್ತ್ರೇ।

ಅತ್ಯಂತಂ ಸಂತತಂ ತ್ವಂ ಪ್ರದಿಶಪದಯುಗೇ ಹಂತ

ಸಂತಾಪಭಾಜಾಂ

ಅಸ್ಮಾಕಂ ಭಕ್ತಿಮೇಕಾಂ ಭಗವತ ಉತ ತೇ ಮಾಧವಸ್ಯಾಥ

ವಾಯೋಃ ।।7।।

ಭೂಮಿಯಲ್ಲಿ ಇರುವ ಭಕ್ತರ ಅನಾಧಿಕಾಲದ ಅವಿದ್ಯಾ ಕಾಮಕರ್ಮಾದಿರೂಪವಾದ ಹಗ್ಗವನ್ನು (ಲಿಂಗ ದೇಹವನ್ನು) ಕತ್ತರಿಸಿ ಆನಂದವನ್ನು ಕೊಡುವ ಮುಂದಿನ ಕಲ್ಪದಲ್ಲಿ ಬ್ರಹ್ಮನ ಪೀಠವನ್ನು ಅಲಂಕರಿಸಲಿರುವ(ಭಾವೀ ಬ್ರಹ್ಮನಾಗುವ) ಜ್ಞಾನಾನಂದಾದಿ ಗುಣಗಳಿಂದ ಕೂಡಿದ ಭಾರತೀದೇವಿಗೆ ಪತಿಯಾದ ವಾಯುದೇವರಲ್ಲಿ ಮುಡಿಯಲ್ಲಿ ಕರಗಳೆರಡ ಜೋಡಿಸಿ ಪ್ರಾರ್ಥಿಸುವುದೆನಂದರೆ ಸಂಸಾರದಲ್ಲಿ ಬೇಯುವ ನಮಗೆ ಲಕ್ಷ್ಮೀಪತಿಯಾದ ನಾರಾಯಣನ ಪಾದಕಮಲಗಳಲ್ಲಿ ಹಾಗು ನಿನ್ನ ಚಾರಣಾರವಿಂದಗಳಲ್ಲಿ ನಿತ್ಯನಿರ್ಮಲವಾದ ಭಕ್ತಿಯನ್ನು ಕುರುಣಿಸು..

# 08

ಸಾಭ್ರೋೇಷ್ಣಾಭೀಶು ಶುಭ್ರ ಪ್ರಭಮಭಯನಭೋ ಭೂರಿ ಭೂಭೃದ್ ವಿಭೂತಿ

ಭ್ರಾಜಿಷ್ಣುರ್ಭೂಃಖುಭೂಣಾಂ ಭವನಮಪಿ ವಿಭೋಽಭೇಧಿ ಬಭ್ರೇ

ಬಭೂವೇ।

ಯೇನ ಭ್ರೂವಿಭ್ರಮಸ್ತೇ ಭ್ರಮಯತು ಸುಭೃಶಂ ಬಭ್ರುವದ್

ದುರ್ಭೃತಾಶಾನ್

ಭ್ರಾಂತಿರ್ಭೇದಾವಭಾಸಸ್ತ್ವಿತಿ ಭಯಮಭಿಭೂರ್ಭೋಕ್ಷ್ಯತೋ

ಮಾಯಿ ಭಿಕ್ಷೂನ್ ।।8।।

ಭಯರಹಿತನಾದ ಮತ್ತು ಭಯಪರಿಹಾರಕನಾದ

ಜೀವೋತ್ತಮರಾದ ವಾಯುದೇವರೇ ಯಾವ ನಿಮ್ಮ ಕಡೆಗಣ್ಣ

ಕುಡಿನೋಟದಿಂದ ಮೋಡಗಳು, ತೀಕ್ಷ್ಣಕಿರಣವುಳ್ಳ

ಸೂರ್ಯನು,ಬಿಳಿಯಾದ ಕಾಂತಿಯುಳ್ಳ ಚಂದ್ರ ಇವರಿಂದ

ಕೂಡಿದ ಆಕಾಶವು, ಮತ್ತು ಚಕ್ರವರ್ತಿಗಳಾದ ಪರ್ವತಗಳು,

ಐಶ್ವರ್ಯದಿಂದ ಪ್ರಕಾಶಿಸುವ ಭೂಮಿಯು, ಮತ್ತು ದೇವತೆಗಳ

ಮನೆಯಾದ ದೇವಲೋಕವೂ ಕೂಡ ಯಾರ ಕಡೆಗಣ್ಣ ಕುಡಿನೋಟವುದಿಂದ ಹುಟ್ಟುತ್ತದೋ,ಧರಿಸಲ್ಪಟ್ಟಿತು,ನಾಶಗೂಳ್ಳುವೂದೋ ಅಂತಹ ಕಡೆಗಣ್ಣ ಕುಡಿನೋಟವು ಜೀವ- ಈಶ್ವರ- ಜಡಗಳಿಗೆ ಪರಸ್ಪರವಾಗಿರುವ ಪಂಚಭೇದದ ಜ್ಞಾನವು ಸುಳ್ಳು ಎಂದು ಹೇಳುವ ಅಂಧಂತಮಸ್ಸಿನಲ್ಲಿ ದು:ಖವನ್ನು ಅನುಭವಿಸತಕ್ಕ ಮಾಯವಾದಿಗಳನ್ನು ಮೋಹಿತರನ್ನಾಗಿಸಲಿ...

# 09

ಯೇSಮುಂ ಭಾವಂ ಭಜಂತೇ ಸುರಮುಖಸುಜನಾರಾಧಿತಂ ತೇ ತೃತೀಯಂ

ಭಾಸಂತೇ ಭಾಸುರೈಸ್ತೇ

ಸಹಚರಚಲಿತೈಶ್ಚಾಮರೈಶ್ಚಾರುವೇಷಾ: ।

ವೈಕುಂಠೇ ಕಂಠಲಗ್ನಸ್ಥಿರಶುಚಿವಿಲಸತ್ ಕಾಂತಿತಾರುಣ್ಯಲೀಲಾ

ಲಾವಣ್ಯಾಪೂರ್ಣಕಾಂತಾ

ಕುಚಭರಸುಲಭಾಶ್ಲೇಷಸಮ್ಮೋದಸಾಂದ್ರಾಃ ||೨||

ದೇವತೆಗಳಿಂದಲೂ ಪೂಜಿಸಲ್ಪಡುವ ಯಾವ ವಾಯುದೇವರ ಮೂರನೆಯ ಅವತಾರವಾದ ಮಧ್ವಾವತಾರವನ್ನು ಯಾರು ಭಕ್ತಿಯಿಂದ ಸೇವಿಸುವರೋ ಅವರು ಮಂಗಳಮಯವಾದ ಅಪ್ರಾಕೃತ ಶರೀರವನ್ನು ಹೊಂದಿ ನಿರ್ಮಲವಾದ ಪ್ರಕಾಶದಿಂದ ಕೂಡಿದ ಯೌವನ ವಿಲಾಸಮಯವಾದ ಸೌಂದರ್ಯದಿಂದಕೂಡಿದ ಸ್ತ್ರೀಯರ ಎತ್ತರ ಎದೆಯ ಖನಿಯಾದ ರಮಣಿಯೊಡನೆ ಪೂರ್ಣವಾಗಿ ಸಂತೋಷವನ್ನು ವೈಕುಂಠ ಲೋಕದಲ್ಲಿ ಅನುಭವಿಸುವರು..

10

ಆನಂದಾನ್ ಮಂದ ಮಂದಾ ದದತಿ ಹಿ ಮರುತ:ಕುಂದ

ಮಂದಾರ ನಂದ್ಯಾ

ವರ್ತಾಮೋದಾನ್ ದಧನಾ

ಮೃದುಪದಮುದಿತೋದ್ಗೀತಕೈ:ಸುಂದರೀಣಾಮ್ ।

ವೃಂದೈರಾವಂದ್ಯ ಮುಕ್ತೇಂದ್ವಹಿಮಗು ಮದುನಾಹೀಂದ್ರ

ದೇವೇಂದ್ರಸೇವ್ಯೇ

ಮೌಕುಂದೇ ಮಂದಿರೇಽಸ್ಮಿನ್ನವಿರತಮುದಯನ್ ಮೋದಿನಾಂ

ದೇವದೇವ ॥10॥

ವಾಯುದೇವರನ್ನು ಭಜಿವ ಭಕ್ತರಿಗೆ ವೈಕುಂಠ ಲೋಕವೇ ದೊರಕುತ್ತದೆ .ಆ ವೈಕುಂಠ ಹೇಗಿದೆ ಎಂದರೆ ಮಧುರವಾದ ಗಾನದಿಂದ ಸಂತೋಷವನ್ನು ನೀಡುವ ಚೆಲುವೆಯರ ತಾಣವಾಗಿದೆ ಅಷ್ಟೆ ಅಲ್ಲ ಕಾಂತಿಯುಳ್ಳ ಚಂದ್ರ,ಉಷ್ಣಕಿರಣಗಳಿಂದ ಕೂಡಿದ ಸೂರ್ಯ, ಮನ್ಮಥ, ಸರ್ಪಗಳಿಗೆ ರಾಜನಾದ ಶೇಷ, ಇಂದ್ರ ಇವರೇ ಮೊದಲಾದ ದೇವತೆಗಳಿಂದ ಚೆನ್ನಾಗಿ ಸೇವಿಸಲ್ಪಡುತ್ತದೆ ಅಂತಹ ಈ ವಿಷ್ಣು ಸಂಬಂಧಿಯಾದ ಆವಾಸಸ್ಥಾನವು ಆದ ಈ ವೈಕುಂಠದಲ್ಲಿ ಶ್ರೇಷ್ಠವಾದ ಪಾರಿಜಾತಪುಷ್ಪ, ನಂದಿಪುಷ್ಪ(ನಂದಿಬಟ್ಟಲು) ಮುಂತಾದ ಪುಷ್ಪಗಳ ಪರಿಮಳಗಂಧವನ್ನು ಹೊತ್ತಿರುವ ಗಾಳಿಗಳು ಯಾವಗಲೂ ಸ್ವರೂಪಾನಂದವುಳ್ಳ ಮುಕ್ತರಿಗೆ ಸುಖವನ್ನು ಕೂಡುತ್ತದೆ.ಅಂತಹ ಲೋಕವು ನಿಮ್ಮನ್ನು ಭಜಿಸುವ ಭಕ್ತರಿಗೆ ದೊರಕುತ್ತದೆ..

11

ಉತ್ತಪ್ತಾsತ್ಯುತ್ಕಟ ತ್ವಿಟ್ ಪ್ರಕಟ ಕಟಕಟಧ್ವಾನ

ಸಂಘಟ್ಟನೋದ್ಯದ್

ವಿದ್ಯುದ್ ವ್ಯೂಢ ಸ್ಫು ಲಿಂಗ ಪ್ರಕರವಿಕಿರಣೋತ್ ಕ್ವಾಥಿತೇ

ಬಾಧಿಂತಾಂಗಾನ್ ।

ಉದ್ಗಾಢಂ ಪಾತ್ಯಮಾನಾ ತಮಸಿ ತತ ಇತ: ಕಿಂಕರೈ:ಪಂಕಿಲೇ

ತೇ

ಪಂಕ್ತಿರ್ಗ್ರಾವ್ಣಾಂ ಗರಿಮ್ಣಾ ಗ್ಲಪಯತಿ ಹಿ ಭವದ್ ದ್ವೇಷಿಣೋ

ವಿದ್ವದಾದ್ಯ ।।11।।

ಜ್ಞಾನಿ ಶ್ರೇಷ್ಠರಾದ ವಾಯುದೇವರೇ! ತಾಮಸರಾದ ಹರಿಗುರುಗಳ ದ್ವೇಷಿಗಳು ಯಾರಿದ್ದಾರೆ ಅವರನ್ನೆಲ್ಲ ನಿಮ್ಮ ಕಿಂಕರರು ನಿತ್ಯನರಕಕ್ಕೆ ತಳ್ಳುತ್ತಾರೆ . ಅಲ್ಲಿ ಅವರು ಎನು ಕಷ್ಟಗಳನ್ನು ಅನುಭವಿಸುತ್ತಾರೆಂದರೆ. ಭಾರವಾದ ಮತ್ತು ಕಣ್ಣನ್ನೆ ಕೋಯುವಂತಹ ಕಲ್ಲುಗಳನ್ನು ಅವರ ತಲೆಯ ಮೇಲೆ ಬಿಸಾಡುತ್ತಾರೆ . ಆ ರೀತಿ ಬಿಸಾಡುವಾಗ ಪರಸ್ಪರ ಕಲ್ಲುಗಳಿಗೆ ಸಂಘರ್ಷಣೆಯಾಗಿ ಬೆಂಕಿಯ ಕಡಿಗಳು ಹೂರಬರುತ್ತದೆ ಆ ಬಂದ ಕಡಿಗಳು ನರಕದಲ್ಲಿ ಇರುವ ಕೆಸರಿನಲ್ಲಿ ಬಿದ್ದು ಕೆಸರು ಕುದಿಯುತ್ತದೆ . ಅಂತಹ ಕೆಸರಿನಲ್ಲಿ ಬಿದ್ದು ಹರಿಗುರುದ್ವೇಷಿಗಳು ಚೆನ್ನಾಗಿ ಹಿಂಸೆಯನ್ನು ಪಡುತ್ತಾರೆ . (ಯಾರು ಹರಿಗುರುದ್ವೇಷಿಗಳೂ ಅವರಿಗೆ ಆಗುವ ದುರ್ಗತಿ...)

ಅಸ್ಮಿನ್ನಸ್ಮದ್ ಗುರೂಣಾಂ ಹರಿಚರಣ ಚಿರಧ್ಯಾನ
ಸನ್ಮಂಗಲಾನಾಂ
ಯುಷ್ಮಾಕಂ ಪಾರ್ಶ್ವಭೂಮಿಂ ಧೃತರಣರಣಿಕಸ್ವರ್ಗಿಸೇವ್ಯಾಂ
ಪ್ರಪನ್ನ: ।
ಯಸ್ತೂದಾಸ್ತೇ ಸ ಆಸ್ತೇಽಧಿಭವಮಸುಲಭಕ್ಲೇಶನಿರ್ಮೋಕಮಸ್ತ
ಪ್ರಾಯಾನಂದಂ ಕಥಂಚಿನ್ನವಸತಿ ಸತತಂ ಪಂಚಕಷ್ಟೇತಿಕಷ್ಟೇ
।।12।।

ಹರಿಚರಣಕ್ಕೆ ಶರಣರಾದಭಕ್ತರಿಗೆ ಮಂಗಲವನ್ನು ಕರುಣಿಸುವ ತಮ್ಮ ಪಾದದ ಧೂಳುಗಳನ್ನು ದೇವತೆಗಳು ಭಕ್ತಿಯಿಂದ ನಿತ್ಯವು ಸೇವಿಸುತ್ತರೇ. ಲೋಕದಲ್ಲಿ ಒಮ್ಮೆ ನಿಮ್ಮ ಪಾದಗಳಿಗೆ ಅಥವಾ ಶಾಸ್ತ್ರಗಳಿಗೆ ಶರಣರಾಗಿದ್ದು ಅನಂತರ ಅದನ್ನು ಯಾರು ಉಪೇಕ್ಷಿಸುತ್ತಾನೋ ಅಂತಹ ವ್ಯಕ್ತಿ ರೌರವ ವಹ್ನಿ ಇದೇ ಮೊದಲಾದ ನರಕಗಳನ್ನು ಹೊಂದಲಾರ . ಆನಂದಾವಿದ್ದೂ

ಇಲ್ಲದಂತಹ ಅಲ್ಪ ಸುಖ ಮಹಾ ದು:ಖಮಯವಾದ ನಿತ್ಯ ಸಂಸಾರದಲ್ಲಿ ಇರುತ್ತಾನೆ.

(ನಿಮ್ಮ ಕಾರುಣ್ಯವನ್ನು ಅರ್ಥಮಾಡಿಕೊಳ್ಳದೇ ಯಾರು ಅಸಡ್ಡೆ ಮಾಡುವನೋ ಅವನಿಗೆ ನಿತ್ಯ ಸಂಸಾರವೇ ಗತಿ..)

## 13

ಕ್ಷುತ್ ಕ್ಷಾಮಾನ್ ರೂಕ್ಷ ರಕ್ಷೋ ರದಖರ ನಖರ ಕ್ಷುಣ್ಣ ವಿಕ್ಷೋಭಿತಾಕ್ಷಾನ್

ಆಮಗ್ನಾನಂದಕೂಪೇ ಕ್ಷುರಮುಖಮುಖರೈ: ಪಕ್ಷಿಭಿರ್ವಿಕ್ಷತಾಂಗನ್ ।

ಪೂಯಾಸೃಜ್ ಮೂತ್ರವಿಷ್ಠಾಕೃಮಿ ಕುಲಕಲಿಲೇ ತತ್ ಕ್ಷಣ ಕ್ಷಿಪ್ತಶಕ್ತ್ಯಾ

ದ್ಯಸ್ರ್ತ ವ್ರಾತಾರ್ದಿತಾಂಸ್ತ್ವದ್ ದಿಷ ಉಪಜಿಹತೇ ವಜ್ರಕಲ್ಪಾ ಜಲೂಕಾ: ॥13॥

ಹರಿವಾಯುದ್ವೇಷಿಗಳಿಗೆ ಆಗುವ ಅಂಧಂತಮಸ್ಸಿನಲ್ಲಿ ಅವರು ಎನೇಲ್ಲ ಕಷ್ಟಗಳನ್ನು ಅನುಭವಿಸುತ್ತಾರೆಂದರೆ ಆ ಅಂಧಂತಮಸ್ಸು ಕೀವು,ರಕ್ತ,ಮೂತ್ರ, ಮಲ, ಮತ್ತು ಹುಳುಗಳು ಇವೇ ಮೊದಲಾದವುಗಳಿಂದ ಕೂಡಿದೆ. ಮತ್ತು ಕ್ರೂರವಾದ ಸ್ವಭಾವವುಳ್ಳ ಹರಿತವಾದ ಹಲ್ಲುಗಳು ,ತೀಕ್ಷ್ಣವಾದ ಉಗುರುಗಳು, ಮತ್ತುಇವುಗಳಿಂದ ಕೂಡಿ ಅಲ್ಲಿ ಇರುವ ತಾಮಸರಿಗೆ ಕಷ್ಟಗಳನ್ನು ಕೂಡುತ್ತಾರೆ. ಅಷ್ಟೆಲ್ಲ ಕ್ರೂರವಾಗಿ ಶಬ್ದಮಾಡುವ ಹಸಿವುಗಳಿಂದ ಬಳಲುತ್ತಿರುವ ತೀಕ್ಷ್ಣವಾದ ಕೊಕ್ಕುಳ್ಳ ಕಾಗೆ, ಹದ್ದುಗಳಂಥ ಪಕ್ಷಿಗಳು ಬಂದು ಅಲ್ಲಿ ಇರುವ ತಾಮಸರ ಅಂಗಳನ್ನು ಕತ್ತರಿಹಾಕುತ್ತದಂತೆ. ಅದೇ

ಸಮಯದಲ್ಲೇ ಆ ರಾಕ್ಷಸರು ಕೂಡ ತಮ್ಮಲ್ಲಿರುವ ತೀಕ್ಷ್ಣವಾದ ಆಯುಧಗಳನ್ನು ಎಸೆಯುತ್ತಾರೆ. ಅಷ್ಟೆಲ್ಲದೆ ಕ್ರೂರವಾದ ರಕ್ತವನ್ನು ಹೀರವ ವಜ್ರದಂತೆ ಇರುವ ಜಿಗಣೆಗಳು ಕೂಡ ರಕ್ತವನ್ನು ಹೀರುತ್ತದೆ . ಈ ರೀತಿಯಾಗಿ ಯಾರು ಹರಿವಾಯುದ್ವೇಷವನ್ನು ಮಾಡುತ್ತಾರೆ ಅವರಿಗೆ ಆಗುವ ಅಂಧಂತಮಸ್ಸು ಮತ್ತು ಅಲ್ಲಿ ಅವರಿಗೆ ಆಗುವ ಕಷ್ಟಗಳನ್ನು ವರ್ಣಿಸಿದ್ದಾರೆ. ......

14

ಮಾತರ್ಮೇ ಮಾತರಿಶ್ವನ್ ಪಿತರತುಲಗುರೋ ಭ್ರಾತರಿಷ್ಟಾಪ್ತ ಬಂಧೋ

ಸ್ವಾಮಿನ್ ಸರ್ವಾಂತರಾತ್ಮನ್ನಜರ ಜರಯಿತರ್ಜನ್ಮ ಮೃತ್ಯಾಮಯಾನಾಮ್ ।

ಗೋವಿಂದೇ ದೇಹಿ ಭಕ್ತಿಂ ಭವತಿ ಚ ಭಗವನ್ನೂರ್ಜಿತಾಂ ನಿರ್ನಿಮಿತ್ತಾಂ
ನಿರ್ವ್ಯಾಜಾಂ ನಿಶ್ಚಲಾಂ ಸದ್ಗುಣಗಣಬೃಹತೀಂ ಶಾಶ್ವತೀಮಾಶು ದೇವ ||14||

ವಾಯುದೇವ!ನೀನೇ ನನ್ನ ತಂದೆ, ಮಮತೆಯನ್ನು ತೋರುವ ತಾಯಿಯು ನೀನೇ , ಅಣ್ಣನು ನೀನೇ, ಆತ್ಮೀಯ ಬಂಧುವು ನೀನೇ,ಹಿತ ಕೋರುವ ಗೆಳಯನು ನೀನೇ, ಉಪದೇಶ ನೀಡುವ ಗುರುವು ಕೂಡ ನೀನೇ, ನನ್ನ ಸ್ವಾಮಿಯು ನೀನೇ , ಎಲ್ಲರ ಅಂತರ್ಯಾಮಿಯಾಗಿದ್ದು ಅವರ ಜನನ ಮರಣಗಳನ್ನು ನಿಯಮನ ಮಾಡುವ ಷಡ್ಗುಣೈಶ್ವರ್ಯ ಸಂಪನ್ನನಾದ ವೇದಭಿಮಾನಿಯಾದ ವಾಯುದೇವನೇ! ನಮ್ಮ ಸರ್ವಸ್ವವೂ ನೀನೇ ಆಗಿರುವಿ ನಿನ್ನಲ್ಲಿ ನಾ ಕೇಳುವುದೇನೆಂದರೆ ಯಾವ

ಫಲಕಾಮನೇ ಇಲ್ಲದ ಕಪಟವಿಲ್ಲದಂತಹ ಒಳ್ಳೆಯ ವೈರಾಗ್ಯಾದಿ ಗುಣಗಳಿಂದ ಕೂಡಿದ ಸ್ಥಿರವಾದ ಭಕ್ತಿಯನ್ನು ಶ್ರೀಹರಿಯಲ್ಲಿ ಹಾಗೂ ನಿನ್ನಲ್ಲಿ ಸದಾ ಇರುವಂತೆ ಕರುಣಿಸು.....

## 15

ವಿಷ್ಣೋರತ್ಯುತ್ತಮತ್ವಾದಖಿಲ ಗುಣಗಣೈಸ್ತತ್ರ ಭಕ್ತಿಂ ಗರಿಷ್ಠಾಂ

ಸಂಶ್ಲಿಷ್ಟೇ ಶ್ರೀಧರಾಭ್ಯಾಮಮುಮಥ ಪರಿವಾರಾತ್ಮನಾ

ಸೇವಕೇಷು ।

ಯ:ಸಂಧತ್ತೇ ವಿರಿಂಚಶ್ವಸನವಿಹಗಪಾನಂತ ರುದ್ರೇಂದ್ರ

ಪೂರ್ವೇ-

ಷ್ವಾಧ್ಯಾಯಂಸ್ತಾರತಮ್ಯಂ ಸ್ಫುಟಮವತಿ ಸದಾ ವಾಯುರಸ್ಮದ್

ಗುರುಸ್ತಮ್ ॥15॥

ಶ್ರೀ-ಭೂದೇವಿಯರಿಂದ ಅಲಿಂಗಿತನಾದ ಸಮಸ್ತವಾದ ಸರ್ವಜ್ಞತ್ವ, ಸ್ವತಂತ್ರತ್ವ,ಮೊದಲಾದ ಅತ್ಯಂತ ಶ್ರೇಷ್ಠವಾದ ಅನಂತಗುಣಗಳಿಂದ ಕೂಡಿರುವ ಶ್ರೀ ಹರಿಯಲ್ಲಿ ಯಾರು ಬ್ರಹ್ಮ,ವಾಯು,ಗರುಡ,ಶೇಷ,ದೇವೇಂದ್ರ ಇವರೇ ಮೊದಲಾದ ದೇವತೆಗಳಿಂದ ಚೆನ್ನಾಗಿ ಸೇವಿಸಲ್ಪಡುವವನು ಅದ್ದರಿಂದ ಎಲ್ಲ ದೇವತೆಗಳು ಕೂಡ ಶ್ರೀಹರಿಯಪಾದಸೇವಕರೆಂಬ ಭಾವದಿಂದ ಹರಿಯಲ್ಲಿ ಪರಿಪೂರ್ಣವಾದ ಭಕ್ತಿಯನ್ನು ಮಾಡುವರೋ ಅಂತಹ ಭಕ್ತರನ್ನು ನಮ್ಮ ಗುರುಗಳಾದ ವಾಯುದೇವರು ನಿತ್ಯವು ಕೂಡ ಚೆನ್ನಾಗಿ ರಕ್ಷಿಸುತ್ತಾರೆ..

ತತ್ತ್ವೇಜ್ಞಾನ್ ಮುಕ್ತಿಭಾಜಃಸುಖಯಸಿ ಹಿ ಗುರೋ ಯೋಗ್ಯತಾ ತಾರತಮ್ಯಾದ್

ಆಧತ್ಸೇ ಮಿಶ್ರಬುದ್ಧೀನ್ ತ್ರಿದಿವ ನಿರಯ ಭೂ ಗೋಚರಾನ್ ನಿತ್ಯಬದ್ಧಾನ್ ।

ತಾಮಿಸ್ರಾಂಧಾಧಿಕಾಖ್ಯೇ ತಮಸಿ ಸುಬಹುಲಂ ದುಃಖಯಸ್ಯನ್ಯಥಾಜ್ಞಾನ್

ವಿಷ್ಣೋರಾಜ್ಞಾಭಿರಿತ್ಥಂ ಶ್ರುತಿಶತಮಿತಿಹಾಸಾದಿ ಚಾಽಕರ್ಣಯಾಮಃ ।।16।।

ಶ್ರೀಹರಿಯ ಅಪ್ಪಣೆಯಂತೆ ಪರ-ಅಪರವನ್ನು ಚೆನ್ನಾಗಿ ತಿಳಿದುಕೊಂಡ ಉತ್ತಮ ಜೀವರನ್ನು ಮೋಕ್ಷಕ್ಕೆ ಕಳುಹಿಸಿ ಅಲ್ಲಿ ಅವರಿಗೆ ಆನಂದವನ್ನು ಕೊಡುವ,ಪರಾಪರವನ್ನು ಮಿಶ್ರವಾಗಿ ತಿಳಿದಿರುವ ನಿತ್ಯಸಂಸಾರಿ ಜೀವಿಗಳಿಗೆ ಅವರಿಗೆ ಯೋಗ್ಯವಾದ ಸ್ವರ್ಗ- ನರಕ ಮತ್ತು ಭೂಲೋಕದಲ್ಲೇ

ವಾಸಮಾಡುವವರನ್ನಾಗಿ ಮಾಡುವ , ಮತ್ತು ಪರಾಪರವನ್ನು(ಯಥಾರ್ಥ ಅಯಥಾರ್ಥವನ್ನು ) ತಿಳಿಯದೆ ಯಾರು ಅಪರವನ್ನೇ(ಅಯಥಾರ್ಥವನ್ನೇ) ತಿಳಿಯುತ್ತಾರೆ ಅಂತಹ ತಮೋಯೋಗ್ಯರಾದ ಜೀವರನ್ನು ಅವರಿಗೆ ಯೋಗ್ಯವಾದ ಅಂಧಂತಮಸ್ಸಿನಲ್ಲಿ ಹಾಕಿ ಚೆನ್ನಾಗಿ ದು:ಖವನ್ನು ಕೂಡುವ .ಜಗದ್ಗುರುಗಳಾದ ವಾಯುದೇವನೇ! ನಿಮ್ಮ ಈ ಮಹಿಮೆಗಳನ್ನು ನೂರಾರು ವೇದವಚನಗಳಿಂದ ಹಾಗೂ ಭಾರತಾದಿ ಪುರಾಣದ ವಚನಗಳಿಂದ ಕೇಳುತ್ತೇವೆ. ..

17

ವಂದೇಽಹಂ ತಂ ಹನೂಮಾನಿತಿಮಹತ ಮಹಾ ಪೌರುಷೋ ಬಾಹುಶಾಲೀ

ಖ್ಯಾತಸ್ತೇಽಗ್ರ್ಯೋಽವತಾರಃ ಸಹಿತ ಇಹ ಬಹು

ಬ್ರಹ್ಮಚರ್ಯಾದಿಧರ್ಮೈಃ।

ಸಸ್ನೇಹಾನಾಂ ಸಹಸ್ವಾನಹರಹರಹಿತಂ ನಿರ್ದಹನ್

ದೇಹಭಾಜಾಂ

ಅಂಹೋ ಮೋಹಾಪಹೋ ಯಃ ಸ್ಪೃಹಯತಿ ಮಹತೀಂ

ಭಕ್ತಿಮದ್ಯಾಪಿ ರಾಮೇ ।।17।।

ಬಹು ಪರಾಕ್ರಮ, ಬ್ರಹ್ಮಚರ್ಯ,ನಿರ್ಮಲವಾದ ಭಕ್ತಿ, ಇವೇ ಮೊದಲಾದ ಗುಣಗಳಿಂದ ಕೂಡಿದ ಸಜ್ಜನರಲ್ಲಿ ಪ್ರೀತಿಯನ್ನು ಮಾಡಿ ಅವರ ಅಜ್ಞಾನವನ್ನು ಮತ್ತು ಪಾಪಗಳನ್ನು ನಾಶಮಾಡುವುದರಲ್ಲಿ ನಿಮ್ಮ ಮೊದಲನೆಯ ಹನುಮದವತಾರವು ಪ್ರಸಿದ್ಧವಾಗಿದೆ. ಯಾವ ಅವತಾರದಿಂದ ಈಗಲೂ ಕೂಡ ಭೂಮಿಯಲ್ಲಿ ಶ್ರೀರಾಮನ ಗುಣಸಂಕೀರ್ತನೆಯನ್ನು ಮಾಡುತ್ತಾ ಕಿಂಪುರುಷಖಂಡದಲ್ಲಿ

ವಿರಾಮಾನವಾಗಿರುವಿರೋ ಅಂತಹ ನಿಮ್ಮ

ಮಂಗಳಮಯವಾದ ಆ ಅವತಾರವನ್ನು

(ಹನುಮದವತಾರವನ್ನು) ಭಕ್ತಿಯಿಂದ ನಮಸ್ಕರಿಸುತ್ತೇನೆ .

18

ಪ್ರಾಕ್ ಪಂಚಾಶತ್ ಸಹಸ್ರೈರ್ವ್ಯವಹಿತಮಮಿತಂ

ಯೋಜನೈ:ಪರ್ವತಂ ತ್ವಂ

ಯಾವತ್ ಸಂಜೀವನಾದ್ಯೌಷಧ ನಿಧಿಮಧಿಕಪ್ರಾಣ

ಲಂಕಾಮನೈಷೀ:।

ಅದ್ರಾಕ್ಷೀದುತ್ ಪತಂತಂ ತತ ಉತ ಗಿರಿಮುತ್ ಪಾಟಯಂತಂ

ಗೃಹೀತ್ವಾ

ಯಾಂತಂ ಖೇ ರಾಘವಾಂಘ್ರೌ ಪ್ರಣತಮಪಿ ತದೈಕಕ್ಷಣೇ ತ್ವಾಂ
ಹಿ ಲೋಕ:||18||

ಮಹಾಬಲವುಳ್ಳ ನೀನು ಹಿಂದೆ ಐವತ್ತು ಯೋಜನ ದೂರವಾಗಿದ್ದ ವಿಸ್ತಾರವಾದ ಮೃತ ಸಂಜೀವಿನಿ ಮೊದಲಾದ ಔಷಧಿಗಳಿಗೆ ಸ್ಥಾನವಾದ ಗಂಧಮಾದನ ಪರ್ವತವನ್ನು ಒಂದೆ ಕ್ಷಣದಲ್ಲಿ ಲಂಕೆಗೆ ತಂದು ಭಕ್ತಿಯಿಂದ ಶ್ರೀರಾಮನ ಪಾದಕಮಲಗಳಲ್ಲಿ ನಮಸ್ಕಾರ ಮಾಡಿದೆ ಇಂತಹ ಪಾರಾಕ್ರಮವನ್ನು ಸಜ್ಜನ ಸಮುದಾಯ ಕಣ್ಣಾರೆ ಕಂಡಿದೆ ... (ಅಂತಹ ನಿನಗೆ ನಮಸ್ಕಾರ..)

19

ಕ್ಷಿಪ್ತ: ಪಶ್ಚಾತ್ ಸಲೀಲಂ ಶತಮತುಲಮತೇ ಯೋಜನಾನಾಂ ಸ ಉಚ್ಚ:

ತಾವದ್ ವಿಸ್ತಾರವಾಂಶ್ಚಾಪ್ಯುಪಲ ಲವ ಇವ
ವ್ಯಗ್ರಬುದ್ಧ್ಯಾ ತ್ವಯಾಽತ:।
ಸ್ವ ಸ್ವ ಸ್ಥಾನಸ್ಥಿತಾತಿ ಸ್ಥಿರ ಶಕಲ ಶಿಲಾ ಜಾಲ ಸಂಶ್ಲೇಷ ನಷ್ಟ
ಚ್ಛೇದಾಂಕ:ಪ್ರಾಗಿವಾಭೂತ್ ಕಪಿವರ
ವಪುಷಸ್ತೇನಮ:ಕೌಶಲಾಯ ।।19।।

ನಿಮ್ಮ ಕೌಶಲವು ಅದ್ಭುತವಾದದ್ದು ಎಕೆಂದರೆ ಮಹಾಬಲವುಳ್ಳ ನೂರು ಯೋಜನ ಉದ್ದಗಲವಾದ ಗಂಧಮಾದನ ಪರ್ವತವನ್ನು ಕಪಿಸೈನ್ಯಯದ ಪ್ರಾಣರಕ್ಷಣೆಗಾಗಿ ತಂದಿರಿ . ಕಾರ್ಯ(ಕಪಿಗಳ ಜೀವರಕ್ಷಣೆ )ವಾದ ನಂತರ ನಿಂತ ಜಾಗದಿಂದಲೇ ಅನಾಯಾಸವಾಗಿ ಅತಿಭಾರವಾದ ಆ ಗಂಧಮಾದನ ಪರ್ವತವನ್ನು ಒಂದು ಪುಟ್ಟ ಕಲ್ಲನ್ನು ಎಸೆಯುವಂತೆ ನೀವು

ಎಸೆದಾಗ ಅದು ಕಿತ್ತಿದ ಗುರುತೂ ಕೂಡ ಇಲ್ಲದ ಹಾಗೆ ಮತ್ತೆ ಅಲ್ಲೇಯೇ ನೆಲೆ ನಿಂತಿತು . ಎಣೆಯಿಲ್ಲದ ಬುದ್ಧಿ,ಬಲಗಳಿಂದ ಕೂಡಿದ ವಾಯುದೇವರ ಈ ಕಲ್ಪನಾತೀತವಾದ ಕೌಶಲಕ್ಕೆ ನಿತ್ಯನಿರಂತರವಾದ ನಮನಗಳು....

20

ದೃಷ್ಟ್ವಾ ದುಷ್ಟಾಧಿಪೋರಃಸ್ಫುಟಿತ ಕನಕಸದ್ ವರ್ಮ

ಘೃಷ್ಟಾಸ್ಥಿಕೂಟಂ

ನಿಷ್ಪಿಷ್ಟಂ ಹಾಟಕಾದ್ರಿ ಪ್ರಕಟ ತಟ ತಟಾಕಾತಿಶಂಕೋ

ಜನೋಽಭೂತ್ ।

ಯೇನಾಽಜೌ ರಾವಣಾರಿ ಪ್ರಿಯ ನಟನ ಪಟುರ್ಮುಷ್ಟಿರಿಷ್ಟಂ

ಪ್ರದೇಷ್ಟುಂ

ಕಿಂ ನೇಷ್ಟೇ ಮೇ ಸ ತೇsಷ್ಟಾಪದ ಕಟಕ ತಟಿತ್ ಕೋಟಿ ಭಾಮೃಷ್ಟಕಾಷ್ಠ: ||20||

ಯಾವ ಒಂದೇ ಮುಷ್ಟಿಪ್ರಹಾರದಿಂದ ರಾಕ್ಷಸರ ರಾಜನಾದ ಉತ್ತಮವಾದ ಚಿನ್ನದ ಕವಚವನ್ನು ಧರಿಸಿದ ರಾವಣನ ಎದೆಗೆ ಗುದ್ದಿದಾಗ ಮೇರುಪರ್ವತದಂತೆ ವಿಶಾಲವಾದ ಬಂಗಾರದ ಬಣ್ಣದಿಂದ ಕೂಡಿದ ಅವನ ಎದೆ  ಬಿರಿಯಿತು ಅಲ್ಲಿಂದ ರಕ್ತದೋಕುಳಿ ಹರಿದು ಸರೋವರದಂತಾಯಿತು.ಅದು ಹೇಗೆ ಕಾಣುತ್ತಿತ್ತು ಎಂದರೆ ಮೇರುಪರ್ವತದ ತಪ್ಪಲಲ್ಲಿ ಕೆನ್ನೀರ ಕೆರೆಯಂತೆ ನೋಡುವವರಿಗೆ ಕಾಣುತ್ತಿತ್ತು. ಅಂತಹ ಕೋಟಿ ಮಿಂಚುಗಳ ಕಾಂತಿಯಿಂದ ಕೂಡಿದ ಶ್ರೇಷ್ಠವಾದ ಚಿನ್ನದ ಕಡಗವನ್ನು ಧರಿಸಿದ ನಿಮ್ಮ ಮುಷ್ಟಿಯು ನನ್ನ ಅಭೀಷ್ಟವನ್ನು ಕೊಡಲಿ..

21

ದೇವ್ಯಾದೇಶ ಪ್ರಣೀತಿ ದ್ರುಹಿಣ ಹರವರಾವಧ್ಯ ರಕ್ಷೋ ವಿಘಾತಾ

ದ್ಯಾಸೇವೋದ್ಯದ್ ದಯಾರ್ದ್ರ ಸಹಭುಜಮಕರೋದ್

ರಾಮನಾಮಾ ಮುಕುಂದ:।

ದುಷ್ಪ್ರಾಪೇ ಪಾರಮೇಷ್ಠ್ಯೇ ಕರತಲಮತುಲಂ ಮೂರ್ಧ್ನಿ ವಿನ್ಯಸ್ಯ

ಧನ್ಯಂ

ತನ್ವನ್ ಭೂಯ: ಪ್ರಭೂತ ಪ್ರಣಯ

ವಿಕಸಿತಾಬ್ಜೇಕ್ಷಣಸ್ತ್ವೀಕ್ಷಮಾಣ: ॥21॥

ಶ್ರೀರಾಮನ ಸಂದೇಶವನ್ನು ಸೀತೆಗೂ, ಸೀತೆಯ ಸಂದೇಶವನ್ನು ರಾಮನಿಗೂ ತಲುಪಿಸಿದ ಧೀರರು , ಮತ್ತು ಶ್ರೀರಾಮನ ಅಪ್ಪಣೆಯಂತೆ ಚತುರ್ಮುಖ ಬ್ರಹ್ಮ,ರುದ್ರ, ಮೊದಲಾದ ದೇವತೆಗಳಿಂದ ವರವನ್ನು ಪಡೆದು ಅವಧ್ಯರಾದ

ಅಕ್ಷಕುಮಾರರೇ ಮೊದಲಾದ ರಾಕ್ಷಸರನ್ನು ಸಂಹಾರ ಮಾಡಿದಿರಿ. ಅದರಿಂದ ಪ್ರೀತನಾದ ಶ್ರೀರಾಮ ಎಂದು ಹೆಸರುಳ್ಳ ಮೋಕ್ಷಪ್ರದಾಯಕನಾದ ಭಗವಂತ ವಾತ್ಸಲ್ಯಪೂರ್ಣವಾದ ತಾವರೆಯಂತಹ ಕಣ್ಣುಗಳಿಂದ ನಿಮ್ಮನ್ನು ನೋಡುತ್ತಾ ನಿಮ್ಮ ಶಿರದ ಮೇಲೆ ತನ್ನ ಕರಕಮಲವನ್ನು ಇಟ್ಟು ಬ್ರಹ್ಮ ಪದವಿಯನ್ನು ಹಾಗೂ ತನ್ನೊಡನೆ ವಿಶಿಷ್ಟ ಭೋಗಮಾಡುವ ಭಾಗ್ಯವನ್ನೇ ಕರುಣಿಸಿದ .(ಅಂತಹ ನಿಮಗೆ ನಮಸ್ಕಾರಗಳು)

# 22

ಜಘ್ನೇ ನಿಘ್ನೇನ ವಿಘ್ನೋ ಬಹುಲ ಬಲ ಬಕಧ್ವಂಸನಾದ್ ಯೇನ ಶೋಚದ್

ವಿಪ್ರಾನುಕ್ರೋಶಪಾಶೈರಸುವಿಧೃತಿ

ಸುಖಿಸ್ಯೈಕಚಕ್ರಾಜನಾನಾಮ್।

ತಸ್ಮೈತೇ ದೇವ ಕುರ್ಮ:ಕುರುಕುಲಪತಯೇ ಕರ್ಮಣಾ ಚ ಪ್ರಣಾಮಾನ್

ಕಿರ್ಮೀರಂ ದುರ್ಮತೀನಾಂ ಪ್ರಥಮಮಥ ಚ ಯೋ ನರ್ಮಣಾ ನಿರ್ಮಮಾಥ॥22॥

ಯಾರ ಅಪಾರವಾದ  ದಯೆಯಿಂದ ಏಕಚಕ್ರನಗರದ ವಿಪ್ರರ ದು:ಖವು ಬಕಾಸುರರನ್ನು ಸಂಹರಿಸುವ ಮೂಲಕ ಪರಿಹಾರಿಸಲ್ಪಟ್ಟಿತೋ ಮತ್ತು ದುಷ್ಟರಲ್ಲೇ ಅಗ್ರಗಣ್ಯನಾದ ಬಕನ ತಮ್ಮನಾದ ಕರ್ಮೀರ ಮೊದಲಾದ ರಾಕ್ಷಸರನ್ನು ಅನಾಯಾಸದಿಂದ ಸಂಹರಿಸಿದ

ಅಪಾರವಾದ ದಯೆಯಿಂದ ಕೂಡಿದ ಕುರುವಂಶಕ್ಕೆ ಸ್ವಾಮಿಯಾದಂತಹ ಭೀಮಸೇನ ದೇವರಿಗೆ ನಮ್ಮ

ಶಿರಸಾಷ್ಟಾಂಗ ನಮಸ್ಕಾರಗಳು...

23

ನಿರ್ಮೃದ್ನನ್ನತ್ಯಯತ್ನಂ ವಿಜರವರಜರಾ ಸಂಧಕಾಯಾಸ್ಥಿ

ಸಂಧೀನ್

ಯುದ್ಧೇ ತ್ವಂ ಸ್ವಧ್ವರೇವಾ ಪಶುಮಿವ ದಮಯನ್

ವಿಷ್ಣುಪಕ್ಷದ್ವಿಡೀಶಮ್ ।

ಯಾವತ್ ಪ್ರತ್ಯೇಕ್ಷಭೂತಂ ನಿಖಿಲ ಮಖ ಭುಜಂ

ತರ್ಪಯಾಮಾಸಿಥಾಸೌ

ತಾವತ್ಯಾಽಯೋಜಿ ತೃಪ್ತ್ಯಾಕಿಮುವದ ಭಗವನ್

ರಾಜಸೂಯಾಶ್ವಮೇಧೇ ।।23।।

ಷಡ್ಗುಣೈಶ್ವರ್ಯ ಸಂಪನ್ನನಾದ ದೇವೋತ್ತಮರಾದ

ಭೀಮಸೇನದೇವರೆ!

ಜರೆಯೆಂಬ ರಾಕ್ಷಸಿಯಿಂದ ಹುಟ್ಟಿದ ವಿಷ್ಣು-ವೈಷ್ಣವದ್ವೇಷಿಗಳಲ್ಲೇ ಅಗ್ರ್ರಗಣ್ಯನಾದ ಜರಾಸಂಧನನ್ನು ವಾಕ್ಯಾರ್ಥದಲ್ಲಿ ಸೋಲಿಸಿ ವಿಷ್ಣು ಸರ್ವೋತ್ತಮತ್ವವನನ್ನು ಸ್ಥಾಪಿಸಿ. ಮತ್ತು ಯುದ್ಧದಲ್ಲಿ ಯಜ್ಞದಲ್ಲಿ ಪಶುವನ್ನು ಬಲಿ ನೀಡುವಂತೆ ಅವನನ್ನು ಸಂಹರಿಸಿ ಈ ಸತ್ಕರ್ಮವನ್ನು ಯಜ್ಞವೆಂದು ಅನುಸಂಧಾನ ಮಾಡುತ್ತಾ ಮುಂದೆ ಇದ್ದ ಯಜ್ಞಗಳ ಸಾರಭೋಕ್ತೃವಾದ ಶ್ರೀ ಕೃಷ್ಣನಿಗೆ ಸಮರ್ಪಿಸಿದಿರಿ ಇದರಿಂದ ಶ್ರೀ ಕೃಷ್ಣನಿಗೆ ಮುದ ನೀಡಿದಿರಿ ..

# 24

ಕ್ಷ್ವೇಲಾಕ್ಷೀಣಾಟ್ಟಹಾಸಂ ತವರಣಮರಿಹನ್ನುದ್ ಗದೋದ್ದಾಮ

ಬಾಹೋ

ಬಹ್ವಕ್ಷೋಹಿಣ್ಯನೀಕಕ್ಷಪಣ ಸುನಿಪುಣಂ ಯಸ್ಯ ಸರ್ವೋತ್ತಮಸ್ಯ ।

ಶುಶ್ರೂಷಾರ್ಥಂ ಚಕರ್ಥ ಸ್ವಯಮಯಮಿಹ

ಸಂವಕ್ತುಮಾನಂದತೀರ್ಥ

ಶ್ರೀಮನ್ನಾಮನ್ ಸಮರ್ಥಸ್ತ್ವಮಪಿ ಹಿ ಯುವಯೋಃಪಾದ ಪದ್ಮಂ ಪ್ರಪದ್ಯೇ ।।24।।

ಬಲಿಷ್ಠವಾದ ತೋಳುಗಳುಳ್ಳ ಉತ್ತಮವಾದ ಗದೆಯುಳ್ಳ ಭೀಮಸೇನದೇವರೆ,ಯಾವ ನಿಮ್ಮ ಸಿಂಹನಾದದಂತಹ ಗರ್ಜನೆ ಮಾಡುತ್ತಾ ಶತ್ರುಗಳ ಧೈರ್ಯವಡಗಿಸಿ ಅಕ್ಷೌಹಿಗಳಲ್ಲಿ ಇರುವ ಸೈನಿಕರನ್ನು ನಾಶಮಾಡಿ ಆ ಯುದ್ಧವನ್ನು ಶ್ರೇಷ್ಠವಾದ ಪೂಜೆಯಂದು ಶ್ರೀ ಕೃಷ್ಣನಿಗೆ ಸಮರ್ಪಿಸಿದಿರೋ ಅಂತಹ ನಿಮ್ಮ ಯುದ್ಧಕೌಶಲವನ್ನು ವ್ಯಾಸರೂಪೀ ವಿಷ್ಣುವಾಗಲಿ ಅಥವಾ ಸ್ವಯಂ ಆನಂದತೀರ್ಥರೆಂಬ ಪೂಜ್ಯನಾಮವನ್ನು ಧರಿಸಿದ ನೀವಾಗಲಿ ವರ್ಣನೆ ಮಾಡಬೇಕೇ ಹೊರೆತು ಬೇರಾರು ವರ್ಣನೆ ಮಾಡಲು ಸಾಧ್ಯವಿಲ್ಲ  ಅಂತಹ ವ್ಯಾಸಮಧ್ವರೂಪಿಗಳಾದ ನಿಮ್ಮಿಬ್ಬರ ಪಾದವೆಂಬ ಕಮಲಗಳಿಗೆ ಶರಣು ಹೊಂದುತ್ತೇನೆ...

## 25

ದ್ರುಹ್ಯಂತೀಂ ಹೃದ್ ರುಹಂ ಮಾಂ ದ್ರುತಮನಿಲ ಬಲಾದ್

ದ್ರಾವಯಂತೀಮವಿದ್ಯಾ

ನಿದ್ರಾಂ ವಿದ್ರಾವ್ಯಸದ್ಯೋ ರಚನಪಟುಮಥಾಽಪಾದ್ಯ ವಿದ್ಯಾ

ಸಮುದ್ರ ।

ವಾಗ್ದೇವೀ ಸಾ ಸುವಿದ್ಯಾ ದ್ರವಿಣದ ವಿದಿತಾ ದ್ರೌಪದೀ

ರುದ್ರಪತ್ನ್ಯಾ

ದ್ಯುದ್ರಿಕ್ತಾ ದ್ರಾಗಭದ್ರಾದ್ ರಹಯತು ದಯಿತಾ

ಪೂರ್ವಭೀಮಾಽಜ್ಞಯಾತೇ ॥25॥

ಜ್ಞಾನಸಮುದ್ರನಾದ ಭಕ್ತರಿಗೆ ವಿಜ್ಞಾನದ ಸಂಪತ್ತನ್ನು ಕರುಣಿಸುವ ಭೀಮಸೇನದೇವರ ಅವತಾರಿಯಾದ ಹೇ ವಾಯುದೇವರೆ! ರುದ್ರನ ಪತ್ನಿಯಾದ ಪಾರ್ವತಿ ಮೊದಲಾದವರಿಗಿಂತಲೂ

ಶ್ರೇಷ್ಠಳಾದ ಸಕಲವಾಗಭಿಮಾವಯನಿನಿಯೆಂದು ಪ್ರಸಿದ್ದಳಾದ ತಮ್ಮ ಪ್ರೇಯಸಿಯಾದ ಭಾರತೀದೇವಿಯು ತಮ್ಮ ಅಪ್ಪಣೆಯನ್ನು ಪಡೆದು ಅನಾಧಿಕಾಲದಿಂದ ಬಲಾತ್ಕಾರವಗಿ ಸಂಸಾರದಲ್ಲಿ ಇರುವಂತೆ ನನ್ನನ್ನು ಕಟ್ಟಿಹಾಕಿರುವ ಅಜ್ಞಾನವೆಂಬ ಅಂಧಕಾರವನ್ನು ಓಡಿಸಿ ನನ್ನನ್ನು ಶಾಸ್ತ್ರೀಯ ಕೃತಿರಚನ ಚತುರನನ್ನಾಗಿ ಮಾಡಿ ಅಮಂಗಳಗಳಿಂದ (ಅಮಂಗಳವಾದ ಈ ಸಂಸಾರದಿಂದ) ನನ್ನನ್ನು ಬಿಡುಗಡೆ ಮಾಡಲಿ

# 26

ಯಾಭ್ಯಾಂ ಶುಶ್ರೂಷುರಾಸೀ:ಕುರುಕುಲಜನನೇ
ಕ್ಷತ್ರವಿಪ್ರೋದಿತಾಭ್ಯಾಂ
ಬ್ರಹ್ಮಭ್ಯಾಂ ಬೃಂಹಿತಾಭ್ಯಾಂ ಚಿತಿ ಸುಖವಪುಷಾ
ಕೃಷ್ಣನಾಮಾಸ್ಪದಾಭ್ಯಾಮ್ ।

ನಿರ್ಭೇದಾಭ್ಯಾಂ ವಿಶೇಷಾದ್
ದ್ವಿವಚನವಿಷಯಾಭ್ಯಾಮುಭಾಭ್ಯಾಮಮೂಭ್ಯಾಂ
ತುಭ್ಯಂ ಚ ಕ್ಷೇಮದೇಭ್ಯ:ಸರಸಿಜ ವಿಲಸಲ್ಲೋಚನೇಭ್ಯೋ
ನಮೋಽಸ್ತು ।।26।।

ಕುರುರಾಜನ ವಂಶದಲ್ಲಿ ಭೀಮಸೇನನೆಂಬ ಹೆಸರಿನಿಂದ ಅವತರಿಸಿ ಬ್ರಾಹ್ಮಣ ಮತ್ತು ಕ್ಷತ್ರ ಜಾತಿಯಲ್ಲಿ ಪ್ರಾದುರ್ಭೂತರಾದ ಪೂರ್ಣವಾದ ಜ್ಞಾನ ಆನಂದಾತ್ಮಕವಾದಂತಹ ದೇಹವನ್ನು ಹೊಂದಿದ ವಾಸ್ತವವಾಗಿ ಇಬ್ಬರಲ್ಲೂ ಭೇದವಿಲ್ಲದಿದ್ದರೂ ಕೂಡ ಅವರಲ್ಲಿ ಇರುವ ಅಚಿಂತ್ಯ ಅದ್ಭುತವಾದ ಶಕ್ತಿ ವಿಶೇಷದಿಂದ ವಾಸಿಷ್ಠಕೃಷ್ಣ-ಯಾದವಕೃಷ್ಣರೆಂಬ ಹೆಸರಿನಿಂದ ಕರೆಯುವ ಪರಬ್ರಹ್ಮಶಬ್ದವಾಚ್ಯರಾದ ನಿಮಗೂ ಸುಖ ಜ್ಞಾನ-ಭಕ್ತಿಗಳನ್ನು ಕೂಡುವ ಶ್ರೀವೇದವ್ಯಾಸರನ್ನು ಮತ್ತು ಶ್ರೀಕೃಷ್ಣನನ್ನು ಶ್ರಾದ್ಧೆಯಿಂದಕೂಡಿದ ಭಕ್ತಿಯಿಂದ ಸೇವೆಮಾಡಿದಿರಿ.ಅಂತಹ

ಕೃಷ್ಣ-ವೇದವ್ಯಾಸರಿಗೂ ಮತ್ತು ನಿಮಗೆ ಅನಂತ ನಮಸ್ಕಾರಗಳು.

# 27

ಗಚ್ಛನ್ ಸೌಗಂಧಿಕಾರ್ಥಂ ಪಥಿ ಸ ಹನುಮತಃಪುಚ್ಛಮಚ್ಛಸ್ಯ ಭೀಮಃ

ಪ್ರೋದ್ಧರ್ತುಂ ನಾಶಕತ್ ಸ ತ್ವಮುಮುರು ವಪುಷಾ ಭೀಷಯಾಮಾಸ ಚೇತಿ ।

ಪೂರ್ಣಜ್ಞಾನೌಜಸೋಸ್ತೇ ಗುರುತಮವಪುಷೋಃ ಶ್ರೀಮದಾನಂದತೀರ್ಥ

ಕ್ರೀಡಾಮಾತ್ರಂ ತದೇತತ್ ಪ್ರಮದದ ಸುಧಿಯಾಂ ಮೋಹಕ ದ್ವೇಷಭಾಜಾಮ್ ॥27॥

ಭೀಮಾವತಾರದಲ್ಲಿ ದ್ರೌಪದಿಯ ಕೋರಿಕೆಯಂತೆ ಸೌಗಂಧಿಕಾ ಪುಷ್ಪಗಳನ್ನು ತರಲು ಗಂಧಮಾದನ ಪರ್ವತಕ್ಕೆ ಹೋಗುವಾಗ ಮಾರ್ಗದ ಮಧ್ಯದಲ್ಲಿ ನಿಮ್ಮದೇ ಆದ ಹನುಮದವತಾರವನ್ನು ಕಂಡಿರಿ . ಅವರ ಉದ್ದವಾದ ಬಾಲವನ್ನು ಎತ್ತುವುದಕ್ಕೆ ಆಗದೆ ಸೋತವರಂತೆ ಮತ್ತು ಅವರ ವಿಶಾಲವಾದ ದೇಹವನ್ನು ನೋಡಿ ಹೆದರಿದಂತೆಯೂ ತೋರಿಸಿಕೊಂಡಿರಿ ಈ ಒಂದೇ ಕಾರ್ಯವು ಸಜ್ಜನರಿಗೆ ಮೋದವುವನನ್ನು ಉಂಟುಮಾಡುತ್ತದೆ ದುರ್ಜನರಿಗೆ ಈ ಎರಡೂ ರೂಪಗಳಿಗೂ ಭೇದವಿದೆ ಎಂದು ಭಾಸಮಾಡುವುದಾಗಿ ಅವರಲ್ಲಿ ಅಜ್ಞಾನವನ್ನು ಉಂಟುಮಾಡುತ್ತದೆ . ಜಗದ್ಗುರುಗಳಾದ ಶ್ರೀಮದಾನಂದತೀರ್ಥರೇ! ಬಲ-ಜ್ಞಾನ ಇವುಗಳಿಂದ ಪೂರ್ಣವಾದ ನಿಮ್ಮ ಎರಡೂ ಅವತಾರದಲ್ಲಿ ಮೂಲರೂಪದ ಶಕ್ತಿ ಎಷ್ಟೂ ಅಷ್ಟೇ ಅವತಾರದಲ್ಲೂ ಪೂರ್ಣವಾಗಿ ಇದ್ದರೂ ಕೂಡ ಅದು ಇಲ್ಲದಂತೆ ತೋರಿಸಿದಿರಿ ಇದು ಕೇವಲ ನಿಮ್ಮ ಲೀಲೆಯಷ್ಟೆ

..28

ಬರ್ಹಿಃಕೋಟೀರಟೀಕಃಕುಟಿಲ ಕಟುಮತೀನುತ್ಕಟಾಟೋಪ

ಕೋಪಾನ್

ದ್ರಾಕ್ ಚ ತ್ವಂ ಸತ್ವರತ್ವಾಚ್ಛರಣದ ಗದಯಾ

ಪೋಥಯಾಮಾಸಿಥಾರೀನ್ ।

ಉನ್ಮಥ್ಯಾತಥ್ಯಮಿಥ್ಯಾತ್ವವಚನ

ವಚನಾನುತ್ಪಥಸ್ಥಾಂಸ್ತಥಾಽನ್ಯಾನ್

ಪ್ರಾಯಚ್ಛಃಸ್ವಪ್ರಿಯಾಯೈ ಪ್ರಿಯತಮಕುಸುಮಂ ಪ್ರಾಣ

ತಸ್ಮೈನಮಸ್ತೇ ।।28।।

ಭೀಮಸೇನದೇವರೇ!ನೀವು ಬದರಿಕಾಶ್ರಮದಲ್ಲಿ

ದ್ರೌಪದಿಯೊಡನೆ ವಿಹರಿಸುವಾಗ ಮೇರುಪರ್ವತದ

ಕುಬೇರನಭವನದ ಬಳಿಯಲ್ಲಿರುವ ಸರೋವರದಿಂದ ಐದು

ಬಣ್ಣದ ಸುಂದರವಾದ ಕಮಲಪುಷ್ಪಗಳು ಹಾರಿಬಂದವು ಅದನ್ನು ನೋಡಿದ ದ್ರೌಪದಿಯು ಅವುಗಳನ್ನು ಬಯಸಿದಳೂ ದ್ರೌಪದಿಯ ಕೋರಿಕೆಯಂತೆ ಅವುಗಳನ್ನು ತರಲು ಹೋದಾಗ ಆ ಸರೋವರವನ್ನು ಕಾಯುತ್ತಿದ್ದ ಕ್ರೂರರು ವಂಚಕರೂ ಆದ ಮುನ್ನೂರುಕೋಟಿ ರಕ್ಷಸರನ್ನು ಮತ್ತು ಅವರ ನಾಯಕನಾದ ಮಣಿಮಂತನನ್ನು ಸಂಹರಿಸಿದಿರಿ . ಅದರಂತೆ ಸೌಗಂಧಿಕಾ ಪುಷ್ಪಗಳನ್ನು ತರಲು ಹೋದಾಗ ವಿಶ್ವವನ್ನೇ ಸುಳ್ಳು ಎಂದು ಹೇಳುವ ಕ್ರೂರಿಗಳಾದ ವಂಚಕರೂ ಆದ ಬಹಳ ಕೋಪದಿಂದ ಕೂಡಿ ಕ್ರೋಧವಶರೆಂದೆ ಹೆಸರುಳ್ಳ ದೈತ್ಯರನ್ನು ಸಂಹರಿಸಿ ಪತ್ನಿಯಾದ ದ್ರೌಪದಿಗೆ ಸೌಗಂಧಿಕಾ ಪುಷ್ಪಗಳನ್ನು ಕೊಟ್ಟು ಮುದವನ್ನು ನೀಡಿದಿರಿ .ಈ ನಿಮ್ಮ ಕೌಶಲ ನಮ್ಮ ಕಲ್ಪನಾತೀತವಾದದ್ದು ಅಂತಹ ನಿಮಗೆ ಶಿರಸಾಷ್ಟಾಂಗ ನಮಸ್ಕಾರಗಳು...

ದೇಹಾದುತ್ ಕ್ರಾಮಿತಾನಾಮಧಿಪತಿರಸತಾಮಕ್ರಮಾದ್
ವಕ್ರಬುದ್ಧಿ:
ಕ್ರುದ್ಧ:ಕ್ರೋಧೈಕವಶ್ಯ:ಕ್ರಿಮಿರಿವ ಮಣಿಮಾನ್ ದುಷ್ಕೃತೀ
ನಿಷ್ಕ್ರಿಯಾರ್ಥಮ್ ।
ಚಕ್ರೇ ಭೂತಕ್ರಮೇತ್ಯ ಕ್ರಕಚಮಿವ ಸತಾಂ ಚೇತಸ:ಕಷ್ಟಶಾಸ್ತ್ರಂ
ದುಸ್ತರ್ಕಂ ಚಕ್ರಪಾಣೇರ್ಗುಣಗಣವಿರಹಂ ಜೀವತಾಂ ಚಾಧಿಕೃತ್ಯ
।।29।।

ಭೀಮಸೇನದೇವರಿಂದ ಏಕಕಾಲದಲ್ಲಿ ಹತರಾದ ದೈತ್ಯರು ಮತ್ತು ಅವರ ನಾಯಕನಾದ ಮಣಿಮಂತನು ವಾಯುದೇವರ ಮೇಲೆ ಪ್ರತೀಕಾರ ತೀರಿಸಿಕೊಳ್ಳಲು ಭೂಮಿಯಲ್ಲಿ ಜನ್ಮ ತಾಳಿದರು. ವಾಯುದೇವರಿಗೆ ವೇದನೆ ನೀಡಬಯಸಿದ ಅವರು ವಾಯುದೇವರಿಗೆ ಅತಿಪ್ರಿಯನಾದ ಅನಂತಗುಣಗಳಿಂದ ಕೂಡಿರುವ ಪರಮಾತ್ಮನನ್ನು ನಿರ್ಗುಣನೆಂದೂ,ಜೀವರಿಂದ

ಅತ್ಯಂತ ಭಿನ್ನನಾದ ಭಗವಂತನನ್ನು ತರ್ಕಜಾಲಗಳಿಂದ ಜೀವಬ್ರಹ್ಮರಿಗೆ ಅಭೇದವೆಂದು ಸಾಧನೆಮಾಡಿದರು. ವೇದಶಾಸ್ತ್ರಗಳಿಗೆ ವಿರುದ್ಧವಾದ ಸಜ್ಜನರ ಮನಸ್ಸಿಗೆ ಬಹಳ ದು:ಖದಾಯಕವಾದ ಅದ್ವೈತಶಾಸ್ತ್ರವನ್ನು ಎಲ್ಲೆಡೆ ಹರಡಿಸಿದರು

# .30

ತದ್ ದುಷ್ಪ್ರೇಕ್ಷಾನುಸಾರಾತ್

ಕತಿಪಯಕುನರೈರಾದೃತೋಽನ್ಯೈರ್ವಿಸೃಷ್ಟೋ

ಬ್ರಹ್ಮಾಹಂ ನಿರ್ಗುಣೋಽಹಂ ವಿತಥಮಿದಮಿತಿ

ಹ್ಯೇಷಪಾಷಂಡವಾದ: ।

ತದ್ಯುಕ್ತ್ಯಾಭಾಸಜಾಲ ಪ್ರಸರ ವಿಷ ತರೂದ್ದಾಹ ದೃಕ್ಷಪ್ರಮಾಣ

ಜ್ವಾಲಾಮಾಲಾ ಧರಾಗ್ನಿ:ಪವನ ವಿಜಯತೇ

ತೇಽವತಾರಸ್ತೃತೀಯ: ।।30।।

ಜೀವನು ಬ್ರಹ್ಮನೇ ಆಗಿದ್ದಾನೆ (ಅವರಲ್ಲಿ ಅಭೇದವಿದೆ ) ಬ್ರಹ್ಮನಿರ್ಗುಣನಾಗಿದ್ದಾನೆ  ನಿರಾಕಾರನಾಗಿದ್ದಾನೆ (ಆಕಾರವಿಲ್ಲದವನಾಗಿದ್ದಾನೆ ) ಬ್ರಹ್ಮನ ಕರ್ತೃತ್ವವನ್ನು ಸಾಧಿಸುವ ಸತ್ಯವಾದ ವಿಸ್ಮಯಗಳಿಂದ ಕೂಡಿದ ಈ ವಿಶ್ವವೆಲ್ಲ ಸುಳ್ಳು ಎಂದು ಪ್ರತಿಪಾದಿಸಿದರು ಆ ದುಷ್ಟರು ಕೆಲವರು (ಜ್ಞಾನದುರ್ಬಲರಾದ )ಜನರು ಈ ಸಿದ್ದಾಂತವೇ ಸರಿಯೆಂದು ನಂಬಿ ಅದನ್ನೇ ಅನುಸರಿಸಿದರು ವಿವೇಕವಳ್ಳ ಕೆಲವರು ಅದನ್ನು ಪರಿತ್ಯಜಿಸಿದರು . ಹೀಗೆ ಐಕ್ಯವಾದವೆಂಬ ಮಹಾವಿಷವೃಕ್ಷವನ್ನು ವಿಶ್ವವ್ಯಾಪಿಯಾಗುವಂತೆ ಮಾಡಿದರು. ಶ್ರುತಿಸ್ಮೃತ್ಯಾದಿ ಪ್ರಮಾಣವಚನಗಳೆಂಬ ಜ್ವಾಲೆಗಳ ಸಮೂಹವನ್ನು ಧರಿಸಿದ ಅಗ್ನಿಯಂತೆ ಇರುವ ನೀವು ಆ ವಿಷವೃಕ್ಷವನ್ನು ಸುಡುವುದಕ್ಕಾಗಿ ಮೂರನೆಯ ಮಧ್ವಾವತಾರದಿಂದ ಅವತರಿಸಿದಿರಿ ಇದು ವಿಶ್ವಮಾನ್ಯವಾಗಿದೆ

.31

ಅಕ್ರೋಶಂತೋ ನಿರಾಶಾ ಭಯಭರ ವಿವಶ
ಸ್ವಾಶಯಾಶ್ಛಿನ್ನದರ್ಪಾ:
ವಾಶಂತೋ ದೇಶ ನಾಶಸ್ತ್ವಿತಿ ಬತ ಕುಧಿಯಾಂ ನಾಶಮಾಶಾ
ದಶಾಽಶು ।
ಧಾವಂತೋಽಶ್ಲೀಲ ಶೀಲಾ:ವಿತಥಶಪಥ ಶಾಪಾಶಿವಾ:ಶಾಂತ
ಶೌರ್ಯ:
ತ್ವದ್ವ್ಯಾಖ್ಯಾಸಿಂಹನಾದೇ ಸಪದಿ ದದೃಶಿರೇ ಮಾಯಿ
ಗೋಮಾಯವಸ್ತೇ ।।31।।

ಶ್ರೀಮಧ್ವಗುರುಗಳ ಪ್ರವಚನವೆಂಬ ವ್ಯಾಖ್ಯಾನರೂಪವಾದ ಸಿಂಹಗರ್ಜನೆಯು ಮೊಳಗುತ್ತಿದ್ದಂತೆ ಬಹಳವಾದ ಭಯದಿಂದ ಕೂಡಿದ ಮಾಯಾವಾದಿಗಳೆಂಬ ನರಿಗಳು ನಮಗಿನ್ನು ಜಯವಿಲ್ಲವೆಂದು ತಿಳಿದು ಚಿಂತಾಕ್ರಾಂತರಾದರು .
ಮಧ್ವರಾಯರ ತತ್ವದ ಜ್ಞಾನದ ಬೆಳಕು ಎಲ್ಲೆಡೆ ವ್ಯಾಪಿಸಿದಂತೆ

ಅಜ್ಞಾನವೆಂಬ ಕತ್ತಲೆಯು ನಾಶವಾಗುವುದು ಅನಿವಾರ್ಯವಾಯಿತು . ಇದನ್ನು ಸಹಿಸದ ಮಾಯಾವಾದಿಗಳೆಂಬ ನರಿಗಳು ಏನು ಮಾಡಬೇಕೆಂದು ತಿಳಿಯದೆ ಹತ್ತು ದಿಕ್ಕುಗಳಲ್ಲಿ ಬೇಗನೆ ಓಡಿ ಹೋಗಿ ತಮಗೆ ಒದಗಿದ ವಿನಾಶವನ್ನು ದೇಶಕ್ಕೆ ಬಂದ ವಿಪತ್ತು ಎಂದು ಉದ್ಘೋಷಿಸಿದರು . ಆಚಾರ್ಯರ ತತ್ವದ ಜ್ಞಾನದ ಬೆಳಕು ಎಲ್ಲೆಡೆ ವ್ಯಾಪಿಸದಂತೆ ತಡೆಯುವ ಪ್ರಯತ್ನಗಳನ್ನು ಮಾಡಿದರು.ಆದರೆ ಜನರು ಅವರಲ್ಲಿ ಇರುವ ಮಾನಸಿಕ ಅಸಮತೋಲನೆಯನ್ನು ಗುರುತಿಸಿದ ಕಾರಣದಿಂದ  ಆ ಪ್ರಯತ್ನಗಳು ವಿಫಲವಾದವು.

# 32

ತ್ರಿಷ್ವಪ್ಯೇವಾವತಾರೇಷ್ವರಿಭಿರಪಘೃಣಂ ಹಿಂಸಿತೋ ನಿರ್ವಿಕಾರಃ ಸರ್ವಜ್ಞಃಸರ್ವಶಕ್ತಿಃಸಕಲಗುಣಗಣಾಪೂರ್ಣರೂಪಪ್ರಗಲ್ಭಃ ।

ಸ್ವಚ್ಛ:ಸ್ವಚ್ಛಂದಮೃತ್ಯು:ಸುಖಯಸಿ ಸುಜನಂ ದೇವ ಕಿಂ ಚಿತ್ರಮತ್ರ
ತ್ರಾತಾ ಯಸ್ಯ ತ್ರಿಧಾಮಾ ಜಗದುತ ವಶಗಂ ಕಿಂಕರಾ: ಶಂಕರಾದ್ಯಾ: ॥32॥

ಹನುಮ ಭೀಮ ಮಧ್ವಾವತರಗಳಲ್ಲೂ ಕೂಡ ಶತ್ರುಗಳಾದ ದೈತ್ಯರು  ನಿಮ್ಮ ಮೇಲೆ ಆಕ್ರಮಣಮಾಡಿದರು ಸ್ವಲ್ಪವು ವಿಕಾರವಾಗದೆ ಶತ್ರುಗಳನ್ನೇ ನಿರ್ಮೂಲನ ಮಾಡಿದ ನಿಮ್ಮ ಪರಾಕ್ರಮ ವರ್ಣಿಸಲು ಅಸಾಧ್ಯವಾದ್ದು. ಪಾಪ ಅಜ್ಞಾನದ ಲೇಪವು ಇಲ್ಲದ ಸ್ವೇಚ್ಛಾಮರಣಿಗಳು ಮತ್ತು ಪರಿಪೂರ್ಣವಾದ ಜ್ಞಾನ-ಶಕ್ತಿ ಸದ್ಗುಣಗಣಗಳಿಗೆ ಆಶ್ರಯರೂ ಆದ ನಿಮಗೆ ಶ್ವೇತದ್ವೀಪ ಅನಂತಾಸನ ವೈಕುಂಠ ಪತಿಯಾದ ಶ್ರೀಹರಿಯೇ ಸಾಕ್ಷಾತ್ ಒಡೆಯನಾಗಿದ್ದಾನೆ ಮತ್ತು ಸಮಸ್ತ ಪ್ರಪಂಚ ಮತ್ತು ರುದ್ರದೇವರೇ ಮೊದಲಾದ ಎಲ್ಲಾ ದೇವತೆಗಳು ಕೂಡ ನಿಮ್ಮ

ಆಜ್ಞೆಯನ್ನು ಪಾಲಿಸುತ್ತಾರೆ . ಇಂತಹ ಅದ್ಭುತ ಗುಣಸಂಪತ್ತಿನಿಂದ ಕೂಡಿದ ನೀವು ಸಜ್ಜನರಿಗೆ ಮುದವನ್ನು ನೀಡುವುದು ಅಚ್ಚರಿಯ ಸಂಗತಿಯೇ..?

# 33

ಉದ್ಯನ್ಮಂದಸ್ಮಿತಶ್ರೀಮೃದುಮಧು ಮಧುರಾಲಾಪ ಪೀಯೂಷಧಾರಾ

ಪೂರಾಸೇಕೋಪಶಾಂತಾಸುಖ ಸುಜನ ಮನೋ ಲೋಚನಾಪೀಯಮಾನಮ್।

ಸಂದ್ರಕ್ಷ್ಯೇ ಸುಂದರಂ ಸಂದುಹದಿಹ ಮಹದಾನಂದಮಾನಂದತೀರ್ಥ

ಶ್ರೀಮದ್ ವಕ್ತ್ರೇಂದುಬಿಂಬಂ ದುರಿತನುದುದಿತಂ ನಿತ್ಯದಾಽಹಂ ಕದಾ ನು ||33||

ಮಿನುಗುವ ಮಂದಹಾಸದಿಂದ ಕಂಗೊಳಿಸುತ್ತಿರುವ ಹೆಜ್ಜೇನಿನಂತೆ ಮಧುರವಾದ ಶಾಸ್ತ್ರಗಳೆಂಬ ಅಮೃತದಧಾರೆ ಹರಿಸಿ ಭಗವಂತನನ್ನು ಭಕ್ತರಿಗೆ ತೋರಿಸುವ ಮೂಲಕ  ಸಜ್ಜನರ ಅಜ್ಞಾನ ದು:ಖಗಳನ್ನು ಪರಿಹರಿಸಿ ಆನಂದವನ್ನು ಕೊಡುವ ಶ್ರೀಮದಾನಂದತೀರ್ಥರ ಚಂದ್ರನಂತೆ ಪ್ರಸನ್ನವಾದ ಮುಖವನ್ನು ನಾವೆಂದು ಕಾಣುತ್ತೇವೆ ?

# 34

ಪ್ರಾಚೀನಾಚೀರ್ಣ ಪುಣ್ಯೋಚ್ಚಯ ಚತುರ ತರಾಚಾರತಶ್ಚಾರು ಚಿತ್ತಾನ್

ಅತ್ಯುಚ್ಚಾಂ ರೋಚಯಂತೀಂ ಶ್ರುತಿ ಚಿತ ವಚನಾಂ

ಶ್ರಾವಕಾಂಶ್ಚೋದ್ಯಚುಂಚೂನ್ ।

ವ್ಯಾಖ್ಯಾಮುತ್ ಖಾತದು:ಖಾಂ ಚಿರಮುಚಿತ ಮಹಾಚಾರ್ಯ

ಚಿಂತಾರತಾಂಸ್ತೇ

ಚಿತ್ರಾಂ ಸಚ್ಛಾಸ್ತ್ರಕರ್ತಶ್ಚರಣಪರಿಚರಾನ್ ಶ್ರಾವಯಾಸ್ಮಾಂಶ್ಚ

ಕಿಂಚಿತ್ ।।34।।

ನಿರ್ದುಷ್ಟವಾದ ಶಾಸ್ತ್ರಗಳ ಸಾಹಿತ್ಯವನ್ನು ಕರುಣಿಸಿದ ಪೂರ್ಣರೂ ಶ್ರೇಷ್ಠರೂ ಆದ  ಶ್ರೀಮದಾನಂದತೀರ್ಥರೇ! ಹಿಂದಿನ ಜನ್ಮಗಳಲ್ಲಿ ಮಾಡಲ್ಪಟ್ಟ ಪುಣ್ಯದಿಂದ ಶ್ರೇಷ್ಠವಾದ ಸತ್ಸಂಪ್ರದಾಯಾನುಷ್ಠಾನದಿಂದ ಕೂಡಿದ ನಿರ್ಮಲವಾದ ಮನಸ್ಸುಳ್ಳ ಪ್ರಶ್ನೆ ಮಾಡುವುದರಲ್ಲಿ ಜಾಣರಾದ ಶಿಷ್ಯರನ್ನು ಚೆನ್ನಾಗಿ ಆನಂದಪಡಿಸಿ ಯೋಗ್ಯರಾದ ಶ್ರೋತೃಗಳಿಗೆ ದು:ಖಪರಿಹಾರಕವಾದ ಅದ್ಭುತ ಪ್ರಮೇಯಗಳನ್ನು ನೀಡುವ ನಿಮ್ಮ ತತ್ವೋಪದೇಶವನ್ನು ನಿರಂತರ ನಿಮ್ಮ ಧ್ಯಾನದಲ್ಲಿ

ಆಸಕ್ತರಾದ ನಿಮ್ಮ ಪಾದಸೇವಕರೂ ಆದ ನಮಗೂ ಕೂಡ ಸ್ವಲ್ಪವಾದರೂ ಕರುಣಿಸಿರಿ .

# 35

ಪೀಠೇ ರತ್ನೋಪಕ್ಲೃಪ್ತೇ ರುಚಿರ ರುಚಿಮಣಿ ಜ್ಯೋತಿಷಾ ಸನ್ನಿಷಣ್ಣಂ

ಬ್ರಹ್ಮಾಣಾಂ ಭಾವಿನಂ ತ್ವಾಂ ಜ್ವಲತಿ ನಿಜಪದೇ ವೈದಿಕಾದ್ಯಾ ಹಿ ವಿದ್ಯಾ:।

ಸೇವಂತೇ ಮೂರ್ತಿಮತ್ಯ:ಸುಚರಿತ ಚರಿತಂ ಭಾತಿ ಗಂಧರ್ವಗೀತಂ

ಪ್ರತ್ಯೇಕಂ ದೇವ ಸಂಸತ್ಸ್ವಪಿ ತವ ಭಗವನ್ ನರ್ತಿತ ದ್ಯೋವಧೂಷು ।।35।।

ಸತ್ಯಲೋಕದಲ್ಲಿ ಪ್ರಜ್ವಲಿಸುವ ರತ್ನ ವಜ್ರ ವೈಢೂರ್ಯಗಳಿಂದ ಶೋಭಾಯಮಾನವಾದ ಸಿಂಹಾಸನದಲ್ಲಿ ಆಸೀನರಾಗಿರುವ ಪರಮಪರಿಶುದ್ಧರಾದ ಪೂಜ್ಯತಮರಾದ ಪೂರ್ಣಪ್ರಜ್ಞರೇ ! ಭಾವಿ ಬ್ರಹ್ಮರಾದ ತಮ್ಮನ್ನು ವೇದವಿದ್ಯಾಭಿಮಾನಿಗಳಾದ ದೇವತೆಗಳು ಮೂರ್ತಿಮತ್ತಾಗಿ ಬಂದು ಸೇವಿಸುವರು ಮತ್ತು ದೇವತೆಗಳ ನಾಡಿನಲ್ಲಿ ನಡೆಯುವ ಪ್ರತಿಯೊಂದು ಸಭೆಗಳಲ್ಲಿ ಅಪ್ಸರಸ್ತ್ರೀಯರ ನರ್ತನದೊಡನೆ ಗಂಧರ್ವರು ನಿಮ್ಮ ಮಾಹಾತ್ಮ್ಯವನ್ನು ಗಾನ ಮಾಡುತ್ತಾರೆ ..

# 36

ಸಾನುಕ್ರೋಶೈರಜಸ್ರಂ ಜನಿಮೃತಿ ನಿರಯಾದ್ಯೂರ್ಮಿ ಮಾಲಾವಿಲೇಽಸ್ಮಿನ್

ಸಂಸಾರಾಬ್ಧೌ ನಿಮಗ್ನಾನ್ ಶರಣಮಶರಣಾನಿಚ್ಛತೋ ವೀಕ್ಷ್ಯ ಜಂತೂನ್ ।

ಯುಷ್ಮಾಭಿ:ಪ್ರಾರ್ಥಿತ:ಸನ್ ಜಲನಿಧಿಶಯನ:ಸತ್ಯವತ್ಯಾಂ ಮಹರ್ಷೇ:

ವ್ಯಕ್ತಶ್ಚನ್ಮಾತ್ರ ಮೂರ್ತಿರ್ನ ಖಲು ಭಗವತ:ಪ್ರಾಕೃತೋ ಜಾತು ದೇಹ:||36||

ಶ್ರೀಮಧ್ವಗುರುಗಳ ಕಾರಣ್ಯವು ದೊಡ್ಡದು . ಯಾಕೆಂದರೆ ಜನನ ಮರಣ ನರಕ ಇವೇ ಮೊದಲಾದ ಅಲೆಗಳಿಂದ ಕಲುಷಿತವಾದದ್ದು ಸಂಸಾರವೆಂಬ ಸಮುದ್ರ ಅಂತಹ ಸಂಸಾರದ ಸಾಗರದಲ್ಲಿ ಮುಳುಗಿದ ರಕ್ಷಕರಿಲ್ಲದೆ ರಕ್ಷಣೇಗಾಗಿ ರಕ್ಷಕರನ್ನು ಬಯಸುತ್ತಿರುವ ಸಜ್ಜನರನ್ನು ತಾವು ದಯೆಯಿಂದ ನೋಡಿ . ಕೇವಲ ಸಜ್ಜನರ ಮೇಲಿನ ಕಾರುಣ್ಯದಿಂದ ಹಾಲಿನ ಸಮುದದಲ್ಲಿ ಪಡಿಸುವ ಶ್ರೀಹರಿಯನ್ನು ಜ್ಞಾನದಾನಕ್ಕಾಗಿ ಅವತರಿಸಲು ಪ್ರಾರ್ಥಿತಿಸಿದಿರಿ .ಆ ಭಗವಂತ ನಿಮ್ಮ ಪ್ರಾರ್ಥನೆಗೆ ಮಾನ್ಯತೆ ಕೊಟ್ಟು ಸತ್ಯವತಿಯಲ್ಲಿ ಋಷಿ ಶ್ರೇಷ್ಠರಾದ ಪರಾಶರರ ದೆಸೆಯಿಂದ

ನಮ್ಮಂತೆ ಭೌತಿಕ ಶರೀರವಲ್ಲದೇ ಜ್ಞಾನನಂದಾತ್ಮಕವಾದ ಶರೀರಧಾರಿಯಾಗಿ 'ವೇದವ್ಯಾಸ'ರಾಗಿ ಅವತಾರವನ್ನು ಮಾಡಿದರು. ಅಂತಹ ಭಗವಂತನ ಅವತಾರಕ್ಕೆ ನಿಮ್ಮ ಪ್ರಾರ್ಥನೆಯು ಮತ್ತು ನಮ್ಮ ಮೇಲೆ ನಿಮಗಿರುವ ಕಾರುಣ್ಯವು ನಿದರ್ಶನವಾಗಿ ಕಾಣಸಿಗುತ್ತದೆ . (ಆದ್ದರಿಂದ ಶ್ರೀಮದಾನಂದತೀರ್ಥ ಭಗವತ್ಪಾದರ ಕಾರುಣ್ಯ ಅಪಾರವಾದದ್ದು .)

37

ಅಸ್ತವ್ಯಸ್ತಂ ಸಮಸ್ತಶ್ರುತಿಗತಮಧಮೈ ರತ್ನಪೂಗಂ ಯಥಾಂಧೈಃ

ಅರ್ಥಂ ಲೋಕೋಪಕೃತ್ಯೈ ಗುಣಗಣನಿಲಯಃಸೂತ್ರಯಾಮಾಸ ಕೃತ್ಸ್ನಮ್ ।

ಯೋಽಸೌ ವ್ಯಾಸಾಭಿದಾನಸ್ತಮಹಮಹರಹರ್ಭಕ್ತಿತಸ್ತ್ವತ್ ಪ್ರಸಾದಾತ್

ಸದ್ಯೋ ವಿದ್ಯೋಪಲಬ್ಧ್ಯೈ ಗುರುತಮಮಗುರುಂ ದೇವದೇವಂ ನಮಾಮಿ ||37||

ಕುರುಡರ ಕೈಯಲ್ಲಿ ರತ್ನಗಳನ್ನು ಜೋಡಿಸಲು ಕೊಟ್ಟರೆ ಅವರು ಹೇಗೆ ಅವುಗಳ ಗಾತ್ರ ರೂಪಗಳನ್ನು ತಿಳಿಯದೇ ಅಸ್ತವ್ಯಸ್ತವಾಗಿ ಜೋಡಿಸುತ್ತಾರೋ ಅದೇ ರೀತಿಯಾಗಿ ಒಳ ಅರ್ಥ ತಿಳಿಯುವ ಸಾಮರ್ಥ್ಯವಿಲ್ಲದ ಕೆಲವರು ವೇದಶಾಸ್ತ್ರಗಳಿಗೆ ಇರುವ ಒಳ ಅರ್ಥಗಳೆಂಬ ರತ್ನಗಳನ್ನು ವಿಪರೀತವಾಗಿ ವಾಖ್ಯಾನಿಸಿದರು (ಜೋಡಿಸಿದರು) ಅಂತಹ ಪ್ರಸಂಗವು ಒದಗಿದಾಗ ಜಗದ್ಗುರುಗಳಾದ ಬ್ರಹ್ಮದಿಗಳಿಗೂ ತತ್ವೋಪದೇಶವನ್ನು ಮಾಡುವ ತಮಗೆ ಗುರುವಿನ ಅಪೇಕ್ಷೆ ಇಲ್ಲದ ಶ್ರೀವೇದವ್ಯಾಸರು ಬ್ರಹ್ಮಸೂತ್ರಗಳನ್ನು ರಚನೆ ಮಾಡಿದರು ಈ ಮೂಲಕ ವೇದಶಾಸ್ತ್ರಗಳಲ್ಲಿ ಇರುವ ಪ್ರಮೇಯರತ್ನಗಳ ಮೌಲ್ಯವನ್ನು ಎತ್ತಿ ಹಿಡಿದರು . ಅಂತಹ ವೇದವ್ಯಾಸರ ಕೃಪೆಯು ಕೂಡಲೇ ಜ್ಞಾನದ ಆವಿಷ್ಕಾರಕ್ಕೆ ಕಾರಣವಾದ್ದರಿಂದ ಅವರ ಕೃಪೆಯ ಪ್ರಾಪ್ತಿಗಾಗಿ

ನಿತ್ಯವೂ ಭಕ್ತಿಯಿಂದ ಅವರನ್ನು ಹಾಗೂ ಅವರ ಅನುಗ್ರವನ್ನು ದೊರಕಿಸಿಕೊಡುವ ತಮ್ಮನ್ನು ( ಶ್ರೀಮಧ್ವಾಚಾರ್ಯರನ್ನು) ಭಕ್ತಿಯಿಂದ ನಮಿಸುತ್ತೇನೆ..

# 38

ಆಜ್ಞಾಮನ್ಯೈರಧಾರ್ಯಾಂ ಶಿರಸಿ ಪರಿಸರದ್ ರಶ್ಮಿ

ಕೋಟೀರಕೋಟೌ

ಕೃಷ್ಣಸ್ಯಾಕ್ಲಿಷ್ಟ ಕರ್ಮಾ ದಧದನು ಸರಣಾದರ್ಥಿತೋ

ದೇವಸಂಘೈಃ ।

ಭೂಮಾವಾಗತ್ಯ ಭೂಮನ್ನಸುಕರಮಕರೋರ್ಬ್ರಹ್ಮಸೂತ್ರಸ್ಯ

ಭಾಷ್ಯಂ

ದುರ್ಭಾಷ್ಯಂ ವ್ಯಸ್ಯ ದಸ್ಯೋರ್ಮಣಿಮತ ಉದಿತಂ ವೇದ

ಸದ್ಯುಕ್ತಿಭಿಸ್ತ್ವಮ್ ।।38।।

ಸಜ್ಜನರ ಮೇಲೆ ಅಪಾರವಾದ ಕರುಣೆಯಿಂದ ಕೂಡಿದ ಶ್ರೀಹರಿಯು ವೇದವ್ಯಾಸರಾಗಿ ಧರೆಗಿಳಿದು ಬಂದು ಬ್ರಹ್ಮಸೂತ್ರಗಳನ್ನು ರಚಿಸಿ ಅದಕ್ಕೆ ಭಾಷ್ಯವನ್ನು ರಚಿಸಲು ನಿಮಗೆ ಆದೇಶ ನೀಡಿದರು. ಕಾಂತಿಯನ್ನು ಹರಡಿಸುವ ಕಿರೀಟವನ್ನು ತಲೆಯಲ್ಲಿ ಧರಿಸಿದ ನೀವು ಆ ಭಗವಂತನ ಆಜ್ಞೆಯನ್ನು ಆದರದಿಂದ ಧರಿಸಿ ದೇವತೆಗಳ ಪ್ರಾರ್ಥನೆಯನ್ನು ಗೌರವಿಸಿ ಭೂಮಿಗೆ ಬಂದು ಮಣಿಮಂತ ಮೊದಲಾದ ದೈತ್ಯರು ಮಾಡಿದ ಭಾಷ್ಯವನ್ನು ವೇದ-ಶಾಸ್ತ್ರಗಳ ಯುಕ್ತಿಗಳ ಮೂಲಕ ನಿರಾಕರಿಸಿ ಅದ್ಭುತ ಪ್ರಮೇಯಗಳಿಂದ ಕೂಡಿದ ಭಾಷ್ಯವನ್ನು ರಚಿಸಿದಿರಿ . ಇಂತಹ ಭಾಷ್ಯವನ್ನು ರಚಿಸಲು ನಿಮಗಲ್ಲದೆ ಬೇರಾರಿಗೆ ಸಾಧ್ಯವಾಗುತ್ತದೆ ..?

39

ಭೂತ್ವಾಕ್ಷೇತ್ರೇ ವಿಶುದ್ಧೇ ದ್ವಿಜಗಣನಿಲಯೇ

ರೂಪ್ಯಪೀಠಾಭಿಧಾನೇ

ತತ್ರಾಪಿ ಬ್ರಹ್ಮಜಾತಿಸ್ತ್ರಿಭುವನವಿಶದೇ ಮಧ್ಯಗೇಹಾಖ್ಯಗೇಹೇ ।

ಪಾರಿವ್ರಾಜ್ಯಾಧಿರಾಜ:ಪುನರಪಿಬದರೀಂ ಪ್ರಾಪ್ಯ ಕೃಷ್ಣಂ ಚ

ನತ್ವಾ

ಕೃತ್ವಾ ಭಾಷ್ಯಾಣಿ ಸಮ್ಯಗ್ ವ್ಯತನುತ ಚ ಭವಾನ್

ಭಾರತಾರ್ಥಪ್ರಕಾಶಮ್ ।।39।।

ಪರಮಪವಿತ್ರವಾದ ಮೂರು ಲೋಕದಲ್ಲೂ ಪ್ರಸಿದ್ಧವಾದ ಬ್ರಾಹ್ಮಣರಿಗೆ ಆಶ್ರಯವಾದ ರೂಪ್ಯಪೀಠವೆಂಬ ಹೆಸರಿನಿಂದ ಕೂಡಿದ (ಉಡುಪಿ)ಕ್ಷೇತ್ರದ ಹತ್ತಿರವಿರುವ ಪಾಜಕ ನಿವಾಸಿಯಾದ ನಡುಮನೆಯೆಂಬ ಹೆಸರುಳ್ಳ ಮನೆತನದಲ್ಲಿ ಅವತರಿಸಿ ಪರಮಹಂಸ ಪರಿವ್ರಾಜಕಾಚಾರ್ಯರಾಗಿ ಬದರಿಗೆ ಹೋಗಿ ವ್ಯಾಸರ ಅಪ್ಪಣೆಯಂತೆ ಗೀತೆ-ಬ್ರಹ್ಮಸೂತ್ರ-

ಉಪನಿಷತ್ತುಗಳಿಗೆ ಭಾಷ್ಯವನ್ನು ರಚಿಸಿ ಮಹಾಭಾರತದ ಅಭಿಪ್ರಾಯವನ್ನು (ಒಳ ಅರ್ಥವನ್ನು )ತಿಳಿಸಲು ಶ್ರೇಷ್ಠವಾದ ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯವೆಂಬ ಮೇರು ಗ್ರಂಥವನ್ನು ಕರುಣಿಸಿದಿರಿ..

# 40

ವಂದೇ ತಂ ತ್ವಾ ಸುಪೂರ್ಣಪ್ರಮತಿಮನುದಿನಾಸೇವಿತಂ ದೇವವೃಂದೈ:

ವಂದೇ ವಂದಾರುವೀಶೇ ಶ್ರಿಯ ಉತ ನಿಯತಂ ಶ್ರೀಮದಾನಂದತೀರ್ಥಮ್ ।

ವಂದೇ ಮಂದಾಕಿನೀ ಸತ್ ಸರಿದಮಲ ಜಲಾಸೇಕ ಸಾಧಿಕ್ಯಸಂಗಂ

ವಂದೇಽಹಂ ದೇಹ ಭಕ್ತ್ಯಾ ಭವಭಯ ದಹನಂ ಸಜ್ಜನಾನ್ ಮೋದಯಂತಮ್ ।।40।।

ದೇವತಾವೃಂದದಿಂದ ನಿರಂತರವಾಗಿ ಪೂಜ್ಯರಾದ ಪೂರ್ಣಪ್ರಜ್ಞರೆನಿಸಿದ ವಾಯುದೇವರೇ! ತಾವು ರಮಾದೇವಿಯಿಂದ ನಿತ್ಯವು ಆರಾಧ್ಯನಾದ ಸರ್ವೋತ್ತಮನಾದ ನಾರಾಯಣನನ್ನೂ ಮತ್ತು ನಾರಾಯಣನ ಪ್ರೇಯಸಿಯಾದ ಸಿರಿದೇವಿಯನ್ನು ನಿತ್ಯ ನಿರಂತರವಾಗಿ ಆರಾಧಿಸುವವರು. ಅಂತಹ ತಾವು ನಮ್ಮ ಮೇಲಿನ ಕಾರುಣ್ಯದಿಂದ ಕರುಣಿಸಿದ ಶಾಸ್ತ್ರ(ಸರ್ವಮೂಲ) ಗ್ರಂಥಗಳು ಅಪಾರವಾದದ್ದು. ಆ ಗ್ರಂಥಗಳ ಚಿಂತನೆ ಮಾಡಿದರೆ ಸ್ವರ್ಗಗಂಗೆ ಎಂದು ಹೆಸರು ಪಡೆದ ವಿಶ್ವವನ್ನೇ ಪಾವನಮಾಡಿದಂತಹ ಗಂಗೆಯ ಅವಗಾಹನ ಮಾಡುವುದರಿಂದ ಬರುವ ಫಲಕ್ಕಿಂತಲೂ ಅಧಿಕ ಫಲ ನೀವು ನೀಡಿದ ಸರ್ವಮೂಲ ಗ್ರಂಥಗಳ ಚಿಂತನೆಯಿಂದ ಬರುತ್ತದೆ . ಅಂತಹ ಶಾಸ್ತ್ರಗಳನ್ನು ಸಜ್ಜನರಿಗೆ ಕರುಣಿಸುವ ಮೂಲಕ ಸಂಸಾರದ ಭಯವನ್ನು ಪರಿಹರಿಸಿ ಸಂತತ ಮೋದವನ್ನು

ಕರುಣಿಸಿದ ನಿಮಗೆ ನಮ್ಮ ಭಕ್ತಿಶ್ರದ್ಧಾಪೂರ್ಣವಾದ
ಅನಂತಾನಂತ ನಮನಗಳು..

41

ಸುಬ್ರಹ್ಮಣ್ಯಾಖ್ಯಸೂರೇ:ಸುತ ಇತಿ ಸುಭೃಶಂ
ಕೇಶವಾನಂದತೀರ್ಥ
ಶ್ರೀಮತ್ ಪಾದಾಬ್ಜಭಕ್ತ: ಸ್ತುತಿಮಕೃತ
ಹರೇರ್ವಾಯುದೇವಸ್ಯ ಚಾಸ್ಯ ।
ತತ್ ಪಾದಾರ್ಚಾದರೇಣ ಗ್ರಥಿತ ಪದ
ಲಸನ್ಮಾಲಯಾ ತ್ವೇತಯಾ ಯೇ

ಸಂರಾಧ್ಯಾಮೂ ನಮಂತಿ ಪ್ರತತ ಮತಿ ಗುಣಾ ಮುಕ್ತಿಮೇತೇ ವ್ರಜಂತಿ ॥41॥

ಶ್ರೀಹರಿಯ ಮತ್ತು ಶ್ರೀಮದಾನಂದತೀರ್ಥರ ಸರ್ವಸಂಪತ್ಕರವಾದ ಪಾದಕಮಲಗಳಲ್ಲಿ ಭಕ್ತಿಯನ್ನು ಮಾಡುವ ಸುಬ್ರಮಣ್ಯಪಂಡಿತರ ಸುಪುತ್ರರಾದ ತ್ರಿವಿಕ್ರಮಪಂಡಿತರು ರಾಮ-ಕೃಷ್ಣ-ಮತ್ತು ವ್ಯಾಸರೂಪಗಳನ್ನು ಧರಿಸಿದ ಶ್ರೀಹರಿಯ ಮತ್ತು ಹನುಮ-ಭೀಮ-ಮಧ್ವರೂಪಗಳಿಂದ ಕೂಡಿದ ವಾಯುದೇವರ ಮಹಿಮೆಗಳನ್ನು ಸುಂದರವಾದ ಪದಪುಂಜಗಳಿಂದ (ಕೂಡಿದ ಹಾರವನ್ನು ಸಮರ್ಪಿಸಿದ್ದಾರೆ) ವರ್ಣಿಸಿದ್ದಾರೆ . ಈ ಸ್ತೋತ್ರವನ್ನು ಹರಿವಾಯುಗಳ ಪಾದಕಮಲಗಳಲ್ಲಿ ಯಾರು ಭಕ್ತಿಯುಳ್ಳವರಾಗಿ ಭಕ್ತಿ-ಶ್ರದ್ಧೆಯಿಂದ ಪಠಿಸುವರೋ ಮತ್ತು ಈ ಸ್ತೋತ್ರದಿಂದ ಹರಿವಾಯುಗಳನ್ನು ಉಪಾಸನೆ ಮಾಡುವರೋ ಅವರು ಜ್ಞಾನ ಭಕ್ತಿ ವೈರಾಗ್ಯಾದಿ

ಗುಣಗಳಿಂದ ಕೂಡಿದವರಾಗಿ ನಿಶ್ಚಿತವಾಗಿ ಮೋಕ್ಷವನ್ನು ಪಡೆಯುತ್ತಾರೆ ..

# ಶ್ರೀ ಕೃಷ್ಣಾರ್ಪಣ ಮಸ್ತು

## ಹರೇ ಕಾರ್ಪರೇಷ ಕೃಪಾ